# ರಂಗವಲ್ಲಿ

"ಶ್ರೀನಿವಾಸ"ರ ಮುನ್ನುಡಿಯೊಂದಿಗೆ

**ಹೆಣ್ಣುಮಕ್ಕಳ ಕಥಾಸಂಕಲನ**

ಮನೋಹರ ಗ್ರಂಥ ಭಾಂಡಾರ
ಧಾರವಾಡ

ಕ್ಯಾಲಿಕೋ ಪ್ರತಿ
೧–೮–೦

ಸಾಮಾನ್ಯ ಪ್ರತಿ
೧–೧–೦

ಮುದ್ರಕರು :

ಶೇಷಗಿರಿರಾವ ಗೋವಿಂದರಾವ ಕುಲಕರ್ಣಿ

ಸಾಧನ ಮುದ್ರಣಾಲಯ

ಧಾರವಾಡ

∴

ಪ್ರಥಮ ಮುದ್ರಣ

ಈಶ್ವರ ಸಂವತ್ಸರದ ನಾಗಪಂಚಮಿ

೧೯೩೭ ಅಗಸ್ಟ

∵

ಪ್ರಕಾಶಕರು :

ದತ್ತಾತ್ರೇಯ ಬಾಳಕೃಷ್ಣ ಕುಲಕರ್ಣಿ

ಮನೋಹರ ಗ್ರಂಥಭಾಂಡಾರ

ಧಾರವಾಡ

# ಮುನ್ನುಡಿ

ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರ್, ಎಂ. ಎ.

" ಹೆಣ್ಣಿನ ದೃಷ್ಟಿಯ ಅಭಿಪ್ರಾಯವನ್ನು ಸಮಾಜವು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಈ ರೀತಿಯ ಅಭಿಪ್ರಾಯವನ್ನು ವ್ಯಕ್ತಪಡಿಸುವುದು ನಮ್ಮ ಸ್ತ್ರೀಲೇಖಕರು ಕೈಗೊಳ್ಳಬೇಕಾದ ಕೆಲಸವಾಗಿದೆ. ಈ ಕಾರಣದಿಂದ ನಾನು ನಮ್ಮ ಸೋದರಿಯರು ಬರೆದಿರುವ ಈ ಕತೆಗಳಿಗೆ ಸಾಹಿತ್ಯದಲ್ಲಿ ಬಹು ಮುಖ್ಯವಾದ ಒಂದು ಸ್ಥಾನವನ್ನು ಕೊಡುತ್ತೇನೆ. "

ಕನ್ನಡನಾಡಿನ ಹೆಣ್ಣುಮಕ್ಕಳು ರಚಿಸಿರುವ ಸಣ್ಣಕತೆಗಳ ಈ ಸಂಗ್ರಹಕ್ಕೆ ಒಂದು ಮುನ್ನುಡಿಯನ್ನು ಬರೆದುಕೊಡಬೇಕೆಂದು ಮನೋಹರ ಗ್ರಂಥ ಭಾಂಡಾರದ ಮಿತ್ರರು ನನ್ನನ್ನು ಕೇಳಿದಾರೆ. ಮುನ್ನುಡಿ ಎಂಬುದನ್ನು ಬರೆಯುವಲ್ಲಿ ನನ್ನ ಉದ್ದೇಶವೇನಿರುತ್ತದೆಂಬದಾಗಿ ನಾನು ಬೇರೆ ಒಂದು ಸಂದರ್ಭದಲ್ಲಿ ಹೇಳಿದೇನೆ. ಕೆಲದಿನದ ಬರಹಗಾರರು ಹೊಸ ಬರಹಗಾರರೊಂದಿಗೆ ನಿಂತು ನಾವೆಲ್ಲ ತೊಡಗಿರುವುದು ಒಂದೇ ಕೆಲಸದಲ್ಲಿ ಎಂದು ತೋರಿಸುವುದು ನಮ್ಮ ಸಾಹಿತ್ಯದಲ್ಲಿ ಈಗ ಆವಶ್ಯಕ. ಮುನ್ನುಡಿ ಬರೆಯುವುದು ಇದಕ್ಕೆ ಅವಕಾಶವನ್ನು ಕಲ್ಪಿಸುತ್ತದೆ. ಸಾಹಿತ್ಯ ಸೇವೆಗೆ ಕೈಯಿಟ್ಟಿರುವ ಸೋದರಿಯರಿಗೆ ಇಂಥ ಮಾತನ್ನು ಹೇಳಿ ಸ್ವಾಗತವನ್ನು ಬಯಸುವುದು ನನಗೆ ಬಹು ಸಂತೋಷದ ಕೆಲಸ. ಆದಕಾರಣ ನಾನು ಈ ಮುನ್ನುಡಿಯನ್ನು ಬಹು ಸಂತೋಷದಿಂದ ಬರೆಯುತ್ತಿದೇನೆ.

ಸಾಹಿತ್ಯಸೇವೆಯ ಗುಟ್ಟನ್ನು ಸ್ವಲ್ಪವಾದರೂ ಬಲ್ಲವನು ಎಲ್ಲಾ ಲೇಖಕರಿಗೂ ಸ್ವಾಗತವನ್ನೇ ಬಯಸುತ್ತಾನೆ. ತನ್ನ ಅಭಿಪ್ರಾಯವನ್ನು, ತನ್ನ ಪಕ್ಷವನ್ನು, ತನ್ನದೆನ್ನುವುದನ್ನು, ಪೋಷಿಸುವ ಲೇಖನಕ್ಕೆ ಮಾತ್ರವಲ್ಲ; ತನ್ನದಲ್ಲದ, ತನ್ನ ಪಕ್ಷಕ್ಕೆ ಪ್ರತಿಕೂಲವಾದ, ತನಗೆ ವಿರೋಧವೆಂದೇ ಕಾಣುವ ಅಭಿಪ್ರಾಯದ ಲೇಖನಕ್ಕೂ ಅವನ ಪ್ರಕೃತಿ ಸ್ವಾಗತವನ್ನು ಕೊಡುವುದು. ಹೀಗಿರುವಲ್ಲಿ ಈ ಪುಸ್ತಕಕ್ಕೆ ಆದೇ ಕೆಲಸವಾಗಿ ಸ್ವಾಗತವನ್ನು ಹೇಳತಕ್ಕದ್ದೇನು ಎಂದು ಯಾರಿಗಾದರೂ ತೋರಬಹುದು. ಇದು ನಿಜ. ಆದರೆ ಹೆಣ್ಣುಮಕ್ಕಳು ಬರೆಯುತ್ತಿದ್ದಾರೆ ಎಂಬ ಕಾರಣದಿಂದ ಈ ಪುಸ್ತಕವನ್ನು ನಮ್ಮ ಜನರು ಹೆಚ್ಚು ಆದರದಿಂದ

ಬರವಮಾಡಿಕೊಳ್ಳಬೇಕೆಂದು ನನ್ನ ಅಭಿಪ್ರಾಯ. ಹೀಗೆ ಹೇಳುವುದಕ್ಕಾದರೂ ಕಾರಣ ಬರೆಯುವವರು ಹೆಣ್ಣುಮಕ್ಕಳು ಎಂಬುದಲ್ಲ, ವಿಷಯ ಅವರು ಬರೆದಿರುವುದು ಎಂಬುದು. ಈ ಎರಡಕ್ಕೂ ಏನು ವ್ಯತ್ಯಾಸವೆಂದು ಒಡನೆಯೇ ಸ್ಪಷ್ಟವಾಗದಿರಬಹುದು. ಆದದ್ದರಿಂದ ಇದನ್ನು ವಿಶದಪಡಿಸುವುದು ಅಪ್ರಕೃತವಾಗಲಾರದು.

ಈಗ ನಡೆಯುತ್ತಿರುವ ಕಾಲ, ಪ್ರಪಂಚದ ಇತಿಹಾಸದಲ್ಲಿ ಪ್ರಬಲವಾದ ಮಾರ್ಪಾಡುಗಳನ್ನು ತರುತ್ತಿದೆಯೆಂದು ಬಲ್ಲವರು ಹೇಳುತ್ತಿದಾರೆ. ಮಾನವಕುಲದ ಪುರೋಭಿವೃದ್ಧಿಗೆ ಈ ಮಾರ್ಪಾಡುಗಳು ಅವಶ್ಯಕವೆಂದು ಜನರಿಗೆ ತೋರುತ್ತಿದೆ. ಕೃತಯುಗದಲ್ಲಿ ವನವಾಸಿಯಾಗಿದ್ದ ಮನುಜಕುಲ ಕಲಿಯುಗದ ಇಂದಿನ ನಾಗರಿಕ ಸಮಾಜವಾಗಬೇಕಾದರೆ ಬಹುಕಾಲ ಬಹುದೇಶ ಬಹು ಅವಸ್ಥೆಗಳ ಉಳಿಯ ಪೆಟ್ಟು ಅದರ ಬಾಳಿಗೆ ತಾಕಬೇಕಾಯಿತು. ಆ ಬಾಳಿನಲ್ಲಿ ಏರ್ಪಟ್ಟ ನೀತಿನಿಯಮಗಳು ಅನುಭವ ಬಂದಂತೆ ಸ್ವಲ್ಪ ಸ್ವಲ್ಪ ಮಾರ್ಪಡುತ್ತ ಇಂದು ಸಮಾಜದಲ್ಲಿ ಕಾಣುವ ಸಂಸ್ಥೆವ್ಯವಸ್ಥೆಗಳಲ್ಲಿ ರೂಪುಪಡೆದಿವೆ. ಇವುಗಳಿಂದ ಮನುಷ್ಯನಿಗೆ ತೃಪ್ತಿ ಆಗಿಲ್ಲ. ಸ್ವಾರ್ಥವೆನ್ನುವುದು ಮುಖ್ಯವಾಗಿದ್ದ ಸರಳ ಮನೋಧರ್ಮದಲ್ಲಿ ಬಾಳನ್ನು ಮೊದಲುಮಾಡಿ ಮನುಜಕುಲವು ಕೆಲವು ಕಾಲ ಕಳೆದ ಮೇಲೆ ಸರ್ವೇ ಜನಾಃ ಸುಖಿನೋ ಭವಂತು ಎಂದು ಹೇಳಿತು. ಆದರೆ ಈ ಸರ್ವಜನದ ಸೌಖ್ಯವನ್ನು ಹೇಗೆ ಸಾಧಿಸುವುದು ಎಂದು ಅದು ಇನ್ನೂ ಕಂಡಿಲ್ಲ; ಅದನ್ನು ಕಾಣುವವರೆಗೆ ಸುಮ್ಮನಿರುವಂತೆಯೂ ಇಲ್ಲ. ಈ ಕಾರಣದಿಂದ ಸಮಾಜದ ನೀತಿನಿಯಮಗಳು ಇನ್ನೂ ಹೆಚ್ಚು ಹೆಚ್ಚಿನ ಜನರ ಸೌಖ್ಯವನ್ನು ಸಾಧಿಸುವಂತೆ ಮಾರ್ಪಡಬೇಕಾಗಿದೆ. ಅವನ್ನು ಯಾವ ರೀತಿ ಮಾರ್ಪಡಿಸುವುದು ಎನ್ನುವುದಾದರೂ ಸದಾ ವಿಚಾರದಲ್ಲಿರತಕ್ಕ ವಿಷಯ; ಈಗ ಅದು ಎಂದಿಗಿಂತ ವಿಶೇಷವಾಗಿ ತೀವ್ರವಾದ ವಿಚಾರಕ್ಕೆ ಬಂದಿದೆ.

ಸಮಾಜದ ಈಗಣ 'ನೀತಿನಿಯಮಗಳು ನಮಗೆ ತೃಪ್ತಿಕೊಡದೆ ಇರುವುದಕ್ಕೆ ಮುಖ್ಯಕಾರಣ ಅವು ಸಮಾಜದ ಎಲ್ಲ ಅಂಗಗಳ ದೃಷ್ಟಿಗಳನ್ನೂ ಗಣನೆಗೆ ತೆಗೆದುಕೊಳ್ಳದೆ ಏರ್ಪಟ್ಟವೆನ್ನುವುದು. ಆ ನೀತಿನಿಯಮಗಳನ್ನು ತಿದ್ದುವುದಕ್ಕೆ ಎಲ್ಲ ದೃಷ್ಟಿಯ ಅಭಿಪ್ರಾಯಗಳೂ ನಮಗೆ

ದೊರೆಯಬೇಕು. ಸಮಾಜದ ಒಂದರ್ಧವೇ ಹೆಣ್ಣು. ನಮ್ಮ ಸಮಾಜದಂಥ ಸ್ವಲ್ಪ ಹಳೆಯ ವ್ಯಸ್ಥೆಯ ಸಮಾಜಕ್ಕಂತೂ ಈಗಿನ ಕಾಲದ ದೃಷ್ಟಿಯಿಂದ ಅನೇಕ ಪ್ರಶ್ನೆಗಳು ತಲೆದೋರುತ್ತವೆ. ಹೆಣ್ಣು ಎನ್ನುವುದು ಮುಖ್ಯವಾಗಿ ಮನೆಯಲ್ಲಿರುತ್ತಾ ತಾಯಾಗಿ ಲೋಕವನ್ನು ಬೆಳಸುವುದೇ, ಇಲ್ಲ ಗಂಡಿಸಂತೆ ಅನ್ನವನ್ನು ಗಳಿಸುವುದಕ್ಕೆ ಹೊರಡುವುದೇ, ಗಂಡ ಹೆಂಡಿರು ಅರುಂಧತಿ-ವಸಿಷ್ಠರಂತೆ ನಿತ್ಯದಂಪತಿಗಳೇ, ಎರಡು ಹಕ್ಕಿ ಒಂದು ಗೂಡನ್ನು ಮಾಡಿಕೊಂಡಂತೆ ಮನೆ ಎಂಬ ಗೂಡನ್ನು ನಡೆಯಿಸುವ ಕೆಲಕಾಲದ ಜೊತೆಯ ಎರಡು ಬಾಳೇ, ಒಂದು ಗಂಡು ಹಲವು ಹೆಣ್ಣನ್ನು ಹೆಂಡಿರೆನ್ನಬಹುದೇ, ಗಂಡಸಿಗೆ ಹೇಗೋ ಹಾಗೆ ಅಥವಾ ಹಲ ಕೆಲವು ಸಂದರ್ಭಗಳಲ್ಲಿ ಒಂದು ಗಂಡನ್ನು ಬಿಟ್ಟ ಅಥವಾ ಕಳೆದುಕೊಂಡ ಹೆಣ್ಣು ಮತ್ತೊಂದು ಗಂಡಿಗೆ ಜೊತೆಯಾಗಬಹುದೇ, ಹೆಣ್ಣಿಗೆ ಮದುವೆಯೆನ್ನುವುದು ಅವಶ್ಯಕವೇ, ಅವಶ್ಯಕವಾದರೆ ಅದು ಯಾವ ವಯಸ್ಸಿಗೆ ಅವಶ್ಯಕ, ಅದನ್ನು ಮುಂದಾಗಿ ಮಾಡುವುದರ ಅಥವಾ ಕಾಲಕಳೆದು ಮಾಡುವುದರ ಸಾಧಕಬಾಧಕಗಳೇನು, ಇತ್ಯಾದಿ, ಇತ್ಯಾದಿ, ಸ್ತ್ರೀಯರ ಬಾಳನ್ನು ಕುರಿತು ಸಮಾಜವು ಇಂದು ಉತ್ತರಕೊಡಬೇಕಾಗಿರುವ ನೂರು ಪ್ರಶ್ನೆಗಳನ್ನು ಸುಲಭವಾಗಿ ಪ್ರತಿಪಾದಿಸಬಹುದು. ಮಗಳಿಗೆ ವಯಸ್ಸಾಯಿತು ಮದುವೆ ಮಾಡಬೇಕು ಎಂದು ಹೇಳುವ ತಾಯಿ ತನ್ನ ಒಂದು ಅನುಭವದಿಂದ ಸಮಾಜಕ್ಕೆ ಒಂದು ಸೂಚನೆಯನ್ನು ಕೊಡುತ್ತಾಳೆ. ಈ ಸೂಚನೆಯನ್ನು ಹೆಣ್ಣಲ್ಲದೆ ಗಂಡು ಕೊಡುವಂತಿಲ್ಲ. ಅದಕ್ಕೆ ಅವನಿಗೆ ಅಧಿಕಾರವೂ ಇಲ್ಲ. ಹೀಗೆಯೇ ಹೆಣ್ಣಿನ ಬಾಳನ್ನು ಕುರಿತ ಉಳಿದೆಲ್ಲ ವಿಷಯಗಳಲ್ಲಿಯೂ ಹೆಣ್ಣಿನ ಅನುಭವದಿಂದ ಮಾತ್ರ ಹೇಳಬಹುದಾದ ಅಭಿಪ್ರಾಯವಿರುತ್ತದೆ. ಹೆಣ್ಣಿನ ದೃಷ್ಟಿಯ ಆ ಅಭಿಪ್ರಾಯವನ್ನು ಸಮಾಜವು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಈ ರೀತಿಯ ಅಭಿಪ್ರಾಯವನ್ನು ವ್ಯಕ್ತಪಡಿಸುವುದು ನಮ್ಮ ಸ್ತ್ರೀಲೇಖಕರು ಕೈಗೊಳ್ಳಬೇಕಾದ ಕೆಲಸವಾಗಿದೆ.

ಈ ಕಾರಣದಿಂದ ನಾನು ನಮ್ಮ ಸೋದರಿಯರು ಬರೆದಿರುವ ಈ ಕತೆಗಳಿಗೆ ಸಾಹಿತ್ಯದಲ್ಲಿ ಬಹು ಮುಖ್ಯವಾದ ಒಂದು ಸ್ಥಾನವನ್ನು ಕೊಡುತ್ತೇನೆ. " ಇದೇನು ? ಸಾಹಿತ್ಯ ಅಭಿಪ್ರಾಯಗಳನ್ನು ಪ್ರಕಟಿಸಲು

ಗ ಪ ಲ್ಲಿ ಅ ರು

ಹೊರಡಬೇಕೆ? ಕಲೆಗಾಗಿ ಕಲೆ, ಸಾಹಿತ್ಯಕ್ಕಾಗಿಯೇ ಸಾಹಿತ್ಯ, Art for Art's sake, ಎಂಬ ಉನ್ನತಧ್ಯೇಯ ನಮಗೆ ಬೇಡವೆ'' ಎಂದು ಕಲೋಪಾಸಕರು ಕೇಳಬಹುದು. ಸ್ತ್ರೀಯ ದೃಷ್ಟಿಯಿಂದ ಯಾವುದು ಅಪೇಕ್ಷಣೀಯ ಎಂದು ಸೂಚಿಸುವುದು ಸಾಹಿತ್ಯದ ಕಾರ್ಯ ಎಂಬ ಮಾತು ಕಲೆಗಾಗಿ ಕಲೆ ಎಂಬ ಮಾತಿಗೆ ವಿರೋಧಿಯಾಗುವುದಿಲ್ಲ ಎನ್ನುವುದು ಈ ಆಕ್ಷೇಪಕ್ಕೆ ಉತ್ತರ. ಸಾಹಿತ್ಯವೆನ್ನುವುದು ಅಪ್ಪನ ಹೆಣ [illegible]ನಲ್ಲಿ ಬಿದ್ದಿದ್ದರೂ ಒಳಗೆ ನಿಶ್ಚಿಂತೆಯಿಂದ ಆಡುವ ಗಂಜೀಪು ಆಟವಲ್ಲ; ಅದು ಬಾಳಿಗೆ ಸಂಬಂಧಿಸಿಯೇ ಇರುತ್ತದೆ. ಯಾವ ಕೃತಿಯೇ ಆಗಲಿ ಉನ್ನತವಾಗಬೇಕಾದರೆ ಕಲೆಯಾಗಬೇಕೆಂದೇ ಹೊರಡಬೇಕು. ಹಾಗೆ ಹೊರಟು ಅದು ತನ್ನ ಗುರಿಯನ್ನು ಸಾಧಿಸಿದಾಗ ಉತ್ತಮವಾದ ಕಲೆಯಾಗಿರುವುದಲ್ಲದೆ ಲೇಖಕನ ಅನುಭವವನ್ನೂ ಅದರ ಫಲವಾದ ಅಭಿಪ್ರಾಯವನ್ನೂ ವ್ಯಕ್ತಪಡಿಸುತ್ತದೆ. ರಸವಾಗಬೇಕೆಂದು ಹೊರಟ ದ್ರಾಕ್ಷಿ ಆಹಾರವೂ ಆಗುವಂತೆ ಸುಂದರವಾಗಬೇಕೆಂದು ಹೊರಟ ಕಲೆ ಸತ್ಯವನ್ನೂ ಸಾರುತ್ತದೆ. ಸತ್ಯವಾದ ವಿಷಯವನ್ನು ಸುಂದರವಾಗಿ ಹೇಳುವೆನೆನ್ನುವುದೇ ಲೇಖಕನ ಧ್ಯೇಯ. ಜನದ ಏಳಿಗೆಗೆ ಸಾಧಕವಾಗುವ ತಿಳುವಳಿಕೆಯನ್ನು ಒದಗಿಸುವುದೆಂದಮಾತ್ರಕ್ಕೆ ಯಾವ ಲೇಖನವೂ ಕಲೆ ಎಂಬ ಪಟ್ಟದ ಬಾಪಿಂಗವನ್ನು ಕಳೆದುಕೊಳ್ಳಬೇಕಾದದ್ದಿಲ್ಲ.

ಈ ಪುಸ್ತಕದಲ್ಲಿ ಸೇರಿರುವ ಕತೆಗಳು ಈ ಮಾತಿಗೆ ನಿದರ್ಶನವನ್ನು ಒದಗಿಸುತ್ತವೆ. ನಾನು ಈ ಕತೆಗಳನ್ನು ಮೊದಲಿನಿಂದ ಕೊನೆಯವರೆಗೆ ಓದಿದ್ದೇನೆ; ಓದಿ ಸಂತೋಷಪಟ್ಟಿದೇನೆ; ಹಾಗೆಯೇ ನಮ್ಮ ಹೆಣ್ಣು ಮಕ್ಕಳ ಬಾಳುವೆಯನ್ನು ಕುರಿತ ನಾಲ್ಕಾರು ವಿಷಯವನ್ನು ಗ್ರಹಿಸಿದೇನೆ ಅಥವಾ ನೆನೆದುಕೊಂಡಿದ್ದೇನೆ. ಈ ಕತೆಗಳಲ್ಲಿ ವೇಶ್ಯೆ ಎಂದ ಮಾತ್ರಕ್ಕೆ ಒಂದು ಜೀವ ಹೆಣ್ಣಲ್ಲದೆ ಹೋಗುವುದಿಲ್ಲ ಎನ್ನುವುದು ಎರಡು ಕತೆಯಲ್ಲಿ ಬರುತ್ತದೆ. ಹೊರಟುಹೋಗಿದ್ದ ಗಂಡನು ಹಿಂದಕ್ಕೆ ಬರುವುದು ಎರಡು ಕತೆಯಲ್ಲಿ; ಹಾಗೆ ಹೊರಟುಹೋಗಿದ್ದ ಒಬ್ಬನನ್ನು ಕುರಿತ ಟೀಕೆ ಇನ್ನೊಂದರಲ್ಲಿ. ಒಡವೆಯ ಆಸೆ ಸೀರೆಯ ಆಸೆಯಿಂದ ಬರುವ ತೊಡಕು ಎರಡು ಕತೆಯಲ್ಲಿ; ಮದುವೆಯಾದ ಅಥವಾ ಆಗದ ಪುರುಷನನ್ನು ಕಳೆದುಕೊಳ್ಳುವ ದಾರುಣಯಾತನೆ ಎರಡು ಕತೆಯಲ್ಲಿ. ಜೊತೆಯ

೧೦ ಗವಲ್ಲಿ ಹುಡುಗಿಗಾಗಿ ಅವಳ ಸಂಗಾತಿ ಮಾಡಿದ ತ್ಯಾಗ, ದೂರದೇಶದಲ್ಲಿರುತ್ತ ನಾಡನ್ನು ನೆನೆಯುವ ದೇಶಪ್ರೇಮ ಇನ್ನೆರಡು ಕತೆಯ ವಿಷಯ. ಹೀಗೆ ಇಲ್ಲಿ ನಮ್ಮ ನಾಡಿನ ಹೆಣ್ಣುಮಕ್ಕಳ ಮನಸ್ಸು ಯಾವ ವಿಷಯಗಳನ್ನು ಕುರಿತು ಯಾವ ರೀತಿಯಲ್ಲಿ ಹರಿಯುತ್ತಿದೆ ಎನ್ನುವುದು ಕಾಣುತ್ತದೆ. ಒಡವೆ ದೊಡ್ಡದಲ್ಲ, ವಸ್ತ್ರ ದೊಡ್ಡದಲ್ಲ, ನಡತೆ ದೊಡ್ಡದು ಎನ್ನುವುದು; ಹೆಣ್ಣಾದ ಜೀವ ಕೆಲವಕ್ಕೆ ಎಷ್ಟಿದ್ದರೆ ಅಷ್ಟನ್ನು ಊಟಮಾಡುತ್ತ ಗಂಡನೊಬ್ಬನನ್ನು ನೋಡಿಕೊಳ್ಳುವುದು, ಮನೆಯೊಂದನ್ನು ನಡೆಸಿ ಕೊಳ್ಳುವುದು ಇದು ಬೇಕಾಗುತ್ತದೆ ಎನ್ನುವುದು; ಪರೀಕ್ಷೆಗೆ ಕುಳಿತು ಆಗುವ ಪ್ಯಾಸಿಗಿಂತ ಪರೀಕ್ಷೆಗೆ ಹೋಗದೆ ಆಗುವ ದೊಡ್ಡದೊಂದು ಪ್ಯಾಸು ಜೀವನದಲ್ಲಿದೆ ಎನ್ನುವುದು; ಸಮಾಜವು ಸ್ತ್ರೀಯ ದೃಷ್ಟಿಯಿಂದ ಈಗಿನ ವ್ಯವಸ್ಥೆ ಹಲವನ್ನು ಸರಿಪಡಿಸಬೇಕಾಗಿದೆ ಎನ್ನುವುದು: ಈ ಎಲ್ಲ ವಿಷಯ ಈ ಕತೆಗಳಲ್ಲಿ ಕಾಣುತ್ತವೆ. ಈ ಅಭಿಪ್ರಾಯಗಳಾದರೂ ಅಭಿಪ್ರಾಯಗಳೆಂದು ಒಂದು ಉಪನ್ಯಾಸದಲ್ಲಿ ಬಂದಿದ್ದರೆ ನಮ್ಮ ಮನಸ್ಸನ್ನು ಮುಟ್ಟುತ್ತಿದ್ದದಕ್ಕಿಂತ ಚೆನ್ನಾದ ಒಂದು ರೀತಿಯಲ್ಲಿ ನಮಗೆ ಇಲ್ಲಿ ಮುಂದಾಟ್ಟಾಗುತ್ತವೆ. ಉಪನ್ಯಾಸಕರಾದರೆ ಅವರ ತಿಳಿವಳಿಕೆ ಎಷ್ಟು ಎಂದು ಕೇಳಿ ಅವರ ಶಕ್ತಿಯ ವಿಷಯದಲ್ಲಿ ಸಂದೇಹ ಪಡಬಹುದಾಗಿದ್ದವರು ಕೂಡ ಈ ಕತೆಗಳನ್ನು ಓದುತ್ತ ಅವು ಜೀವನವನ್ನು ಸರಿಯಾಗಿ ಚಿತ್ರಿಸಿವೆಯೆಂಬುದನ್ನು ಕಂಡು ಅವುಗಳ ಭಾವವನ್ನು ನಿರಾತಂಕವಾಗಿ ಒಪ್ಪಿಕೊಳ್ಳುತ್ತಾರೆ. ಹೇಳುವವರಿಗಾದರೂ ಇದರಲ್ಲಿ ಒಂದು ಸೌಕರ್ಯ. ನನಗೆ ಹೀಗಾಯಿತು ಅಥವಾ ನಾನು ಕಂಡ ಒಬ್ಬರಿಗೆ ಹೀಗಾಯಿತು ಎಂಬಲ್ಲಿ ಯಾರಿಗಾದರೂ ಸಂಕೋಚವಿರುತ್ತದೆ. ಯಾರದೋ ಕತೆ ಬರೆಯುತ್ತ ಅವರಿಗೆ ಹೀಗಾಯಿತು ಎಂದೂ ಅದನ್ನು ಯಾರೋ ನೋಡಿದರು ಎಂದೂ ಬರೆಯುವುದಕ್ಕೆ ಯಾರೂ ಸಂಕೋಚ ಪಡಬೇಕಾದದ್ದಿಲ್ಲ. ಅಲ್ಲದೆ ಲೇಖಕನು ತನ್ನ ತಿಳಿವಳಿಕೆಯೇನೆಂದು ಹೇಳುವುದಕ್ಕಿಂತ ಇರುವ ವಿಷಯ ಇದು ಎಂದು ಹೇಳಿ ಅದರಿಂದ ತಿಳಿಯಬೇಕಾದದ್ದನ್ನು ಓದುವವರಿಗೆ ಬಿಟ್ಟರೆ ಪ್ರಯೋಜನ ಹೆಚ್ಚು. ಈ ಕತೆಗಳು ಈ ದಾರಿಯಿಂದ ನಮ್ಮ ಸಮಾಜದ ಏಳ್ಗೆಗೆ ಸಹಾಯ
ಎಂಟು ಮಾಡತಕ್ಕವಾಗಿವೆ.

ಇವುಗಳ ಕಲೆಯನ್ನಾದರೂ ನಾನು ಮೆಚ್ಚಿದೇನೆ. ಮುಖ್ಯವಾಗಿ ಇಲ್ಲಿಯ ಕಲೆಗಾರಿಕೆ ಕತೆಹೇಳುವವರ ಮನಸ್ಸಿನ ಸರಳತೆಯಿಂದ ಬಂದಿರ ತಕ್ಕದ್ದು. ಗ್ರಂಥ ಬರೆಯುವದೆಂದರೆ ಮಾತುಗಳನ್ನು ಗಂಟುಹಾಕುವುದು ಎನ್ನುವುದು ಒಂದು ರೀತಿಯ ಸಾಹಿತ್ಯವಿಜ್ಞಾನ. ಎಂದಿದ್ದರೂ ಅದು ತಪ್ಪುತಿಳುವಳಿಕೆಯೇ. ಸರಸ್ವತಿಯ ಕೃಪೆಯಿಂದ ಅದು ಈಗಿನ ಕಾಲಕ್ಕೆ ತೀರ ತಪ್ಪಿದೆಯೆಂದು ಹೇಳಬಹುದು. ಹೇಳುವ ವಿಷಯವನ್ನು ಆದಷ್ಟು ಸಹಜವಾಗಿ ಹಾಗೆಯೇ ಚೆನ್ನಾಗಿ ಹೇಳುವುದು ಸಾಹಿತ್ಯದ ರಾಜಮಾರ್ಗ ಎಂಬ ಭಾವನೆ ಈಗ ವಾಡಿಕೆಗೆ ಬಂದಿದೆ. ಈ ಪುಸ್ತಕದ ಕತೆಗಾತಿ ಸೋದರಿಯರು ಎಲ್ಲರೂ ಈ ರಾಜಮಾರ್ಗದಲ್ಲಿ ನಡೆದಿದಾರೆ. ಪೂರ್ವದಿಂದ ಕತೆಹೇಳುವುದರಲ್ಲಿ ಪ್ರಸಿದ್ಧರಾದವರು ಪ್ರಾಯಶಃ ಇದೇ ದಾರಿಯನ್ನು ಹಿಡಿದರು. ನೈಮಿಷಾರಣ್ಯದ ತಪಸ್ವೀ ಜನರು ಉಳಿದ ಕೆಲಸಗಳನ್ನು ಬೇಗ ಮುಗಿಸಿಕೊಂಡು ಬಂದು ಕೇಳುವಂತೆ ಕತೆಹೇಳಿದ ಸೂತ ಪೌರಾಣಿಕನು ತನ್ನ ಕಥನದಲ್ಲಿ ಅನುಸರಿಸಿದ್ದು ಈ ದಾರಿ. ವಾಲ್ಮೀಕಿ ಮೊದಲಾದವರು ಆ ಮೊದಲು ನಡೆದು ತೋರಿಸಿ ಅದು ಅವರ ಕಾಲಕ್ಕೇ ರಾಜಮಾರ್ಗವಾಗಿತ್ತು. ಹೆಣ್ಣುಮಕ್ಕಳಲ್ಲೂ ಈ ದಾರಿಯಲ್ಲಿ ನಡೆದು ಹೆಸರುಪಡೆದವರು ಉಂಟು. ಹಠಮಾರಿ ಸುಲ್ತಾನರಿಗೆ ಮೂರು ವರ್ಷ ಕತೆಹೇಳಿ ಜೀವವನ್ನು ಉಳಿಸಿಕೊಂಡು ರಾಣಿಯಾದ ಷಹಿರಜಾದೆ ತನ್ನ ಸಾವಿರದಿನದ ಕತೆಯ ಮಾಲೆಯಲ್ಲಿ ಅನುಸರಿಸಿದ್ದು ಈ ದಾರಿಯನ್ನೇ. ಹೆಣ್ಣಾಗಲಿ ಗಂಡಾಗಲಿ ಈ ದಾರಿಯಾವುದೆಂದು ಬೇರೆ ಕೇಳಬೇಕಾದದ್ದಿಲ್ಲ. ಮೊಮ್ಮಕ್ಕಳು ಹೂಂಗುಟ್ಟುತ್ತ ನಿದ್ದೆ ಬಿಟ್ಟು ಕೇಳುವಂತೆ ಕತೆಹೇಳಿದ ಅಜ್ಜಿಯಿಂದ ನಾವೆಲ್ಲ ಇದರ ಜಾಡನ್ನು ಎಳೆತನದಲ್ಲೇ ತಿಳಿಯುತ್ತೇವೆ. ಇದಕ್ಕೆ ಮೂರು ಅಂಗ; ವಿಷಯ ಏನೆಂದು ತಿಳಿಯುವುದು, ಅದರಲ್ಲಿ ರಸ ಎಲ್ಲಿದೆ ಎಂದು ಗ್ರಹಿಸುವುದು, ಅದನ್ನು ಇನ್ನೊಂದು ಮನಸ್ಸಿಗೆ ಮುಟ್ಟುವಂತೆ ಸುಮ್ಮನೆ ಹೇಳುವುದು. ಈ ಪುಸ್ತಕದಲ್ಲಿಯ ಕತೆ ಸ್ವತಂತ್ರವಾದ ಎಲ್ಲದರಲ್ಲಿಯೂ ಆಯಾ ಕತೆಗಾತಿ ಕಂಡ ಒಂದು ವಿಷಯ ಈ ರೀತಿಯಲ್ಲಿ ಪ್ರತಿಪಾದಿತವಾಗಿದೆ. ಅದರಲ್ಲಿ ಕೆಲವು ಭಾಗ ಅವರವರೇ ಕಂಡ ವಿಷಯ. ಅದು ನನಗೆ ತಿಳಿಯುತ್ತಿರುವುದು ಈಗಲೇ ಮೊದಲ ಸಲ. ಅದು ಯಾವುದು ಎಂದು ಹೇಳುತ್ತ ನಾನು ಈ ಮುನ್ನುಡಿಯನ್ನು

ಲಂಬಿಸುವುದಿಲ್ಲ. ಓದುವವರಿಗೆ ಇದು ಯಾವುದೆಂದು ತಾನೇ ತಿಳಿಯುತ್ತದೆ. ಭಾಷಾಂತರದ ಕತೆಗಳಲ್ಲೂ ಮೂಲದ ವಿಷಯವನ್ನು ಕನ್ನಡಕ್ಕೆ ಹೊಂದಿಸಿಕೊಂಡಿರುವುದರಲ್ಲಿ ಕೌಶಲ್ಯ ಕಾಣುತ್ತದೆ.

ಈ ಎಲ್ಲ ಕಾರಣಗಳಿಂದ ನಾನು ಈ ಕತೆಗಳನ್ನು ಸಂತೋಷದಿಂದ ಬರಮಾಡಿಕೊಂಡಿದೇನೆ ಎಂದು ನಾನು ಪುನಃ ಹೇಳುತ್ತೇನೆ. ಕತೆಗಾತಿಯರಲ್ಲಿ ಹಲವರ ವಿಷಯ ಸ್ವಲ್ಪವನ್ನು ನಾನು ಬಲ್ಲೆ. ಕೆಲವರು ನನ್ನ ತಾಯ ತೌರೂರಿನವರು. ನಾನು ಮಗುವಾಗಿದ್ದಾಗ ತಾಯಿ ಹೇಳಿದ ಕತೆಯನ್ನು ಕೇಳಿ ನಲಿದೆನು; ಈ ಮಧ್ಯವಯಸ್ಸಿನಲ್ಲಿ ಅದೇ ಊರಿನ ಈ ಹೆಣ್ಣುಮಕ್ಕಳು ಹೇಳುತ್ತಿರುವ ಕತೆಗಳನ್ನು ಓದಿ ನಲಿದಿದೇನೆ, ಮನ ಮರುಗಿದೇನೆ. ಕೆಲವರು ನನ್ನ ಮಿತ್ರರ ಕುಮಾರ್ತಿಯರು, ಗೃಹಿಣಿಯರು; ಅವರು ಈ ಕಾರ್ಯದಲ್ಲಿ ತೊಡಗಿರುವುದರಿಂದ ಹೆಮ್ಮೆ ಪಟ್ಟಿದೇನೆ. ಎಲ್ಲರೂ ನನ್ನ ತಾಯ್ನಾಡಿನ ಪವಿತ್ರಗರ್ಭದ ಮಕ್ಕಳು, ನನ್ನ ಸೋದರಿಯರು; ಇದನ್ನು ನೆನೆದು ಆನಂದಿಸಿದೇನೆ. ಇವರು ಹೀಗೆಯೇ ತಮ್ಮ ಕೆಲಸದಲ್ಲಿ ಮುಂದುವರಿಯಲೆಂದೂ ನಮ್ಮ ನಾಡು ನಮ್ಮ ಯುಗ ಹಿಂದಿನ ಕಾಲದಂತೆ ಬೇರೆಯ ದೇಶಗಳಂತೆ ಗಾರ್ಗಿ ಮೈತ್ರೇಯಿಯರನ್ನು ಷಹಿರಜಾದೆ ಜಾರ್ಜ್ ಎಲಿಯಟರನ್ನು ಅವ್ವೆ ಕಂತಿಯರನ್ನು ಇವರಲ್ಲಿ ಕಾಣಲೆಂದು ಹಾರೈಸುತ್ತೇನೆ. ಈ ನನ್ನ ಸೋದರಿಯರ ಧ್ಯೇಯ ಹಿರಿದಾಗುತ್ತಲೇ ಇರಲಿ; ಅದನ್ನು ಸಾಧಿಸುವುದರಲ್ಲಿ ಇವರು ಸೋತೆವೆನ್ನದೆ ನಡೆಯಲಿ; ಇವರು ಹಚ್ಚಿರುವ ಈ **ರಂಗವಲ್ಲಿ** ಸರಸ್ವತಿಯ ಭದ್ರ ಗೇಹದ ಕೈಸಾಲೆಯನ್ನು ಬರುವ ಎಲ್ಲ ಕಾಲಕ್ಕೂ ಬೆಳಗುತ್ತ ನಿಲ್ಲಲಿ.

ಬೆಂಗಳೂರು ಈಶ್ವರಸಂ॥
ಆಷಾಢ ಬಹುಳ ಪಂಚಮಿ

**ಶ್ರೀನಿವಾಸ**

ಈಗಿನ ಕನ್ನಡಸಾಹಿತ್ಯದಲ್ಲಿ ಹೆಣ್ಣುಮಕ್ಕಳ ಕೃತಿಗಳು ವಿರಳ. ಅಲ್ಲಿ-ಇಲ್ಲಿ ಪತ್ರಿಕೆಗಳಲ್ಲಿ ಕೆಲವರ ಕತೆಗಳು ಬರುತ್ತಿದ್ದರೂ ಅವೇ ಕೆಲವು ಹೆಸರುಗಳು ತಿರುಗಿ-ಮುರುಗಿ ಕಾಣುತ್ತಿದ್ದುವು. ಆದರೆ ನಮ್ಮ ನಾಡಿನ ಲೇಖಕಿಯರ ಪ್ರಾತಿನಿಧ್ಯವನ್ನು ಪಡೆದ ಲೇಖನಸಂಗ್ರಹವಂತೂ ಇದ್ದೇ ಇಲ್ಲ. ಹೀಗಿರುವಾಗ ಹೆಣ್ಣುಮಕ್ಕಳ ಕತೆಗಳ ಸಂಗ್ರಹವನ್ನು ಪ್ರಕಟಿಸಬೇಕೆಂಬ ನಮ್ಮ ವಿಚಾರವು ಸಫಲವಾಗುವದೋ ಇಲ್ಲವೋ ಎಂದು ನಮಗೆ ಎದೆಗುದಿಯಾಯಿತು. ಆದರೂ ಇದ್ದಷ್ಟು ಜನ ಕತೆಗಾತಿಯರ ಕೃತಿಗಳನ್ನು ಒತ್ತಟ್ಟಿಗೆ ಕೂಡಿಸಿ ನಮ್ಮ ಕನ್ನಡ ಸೋದರಿಯರ ಕಲೆಯ ಪರಿಚಯವನ್ನು ಕರ್ನಾಟಕಕ್ಕೆ ಮಾಡಿಕೊಡಬೇಕೆಂಬ ನಮ್ಮ ಇಚ್ಛೆ ಕುಗ್ಗಲಿಲ್ಲ. ನಾವು ಕಾರ್ಯರಂಗಕ್ಕಿಳಿದ ಬಳಿಕ ನಮ್ಮ ಎದೆಗುದಿ ಕೇವಲ ಭ್ರಮೆ ಎಂದು ನಿದರ್ಶನಕ್ಕೆ ಬಂದು ಬಹಳ ಸಂತೋಷವಾಯಿತು.

ಹನ್ನೆರಡು

ಕನ್ನಡನಾಡಿನಲ್ಲಿ ಒಳ್ಳೆಯ ಕತೆಗಾತಿಯರು ಬೇಕಾದಷ್ಟು ಜನ ಇದ್ದಾರೆ. ನಮಗೆ ಗೊತ್ತಿದ್ದಮಟ್ಟಿಗೆ ಪತ್ರವ್ಯವಹಾರ ಮಾಡಿದರೂ ಹದಿನಾಲ್ಕು ಸಹೋದರಿಯರ ಹದಿನಾಲ್ಕು ಕತೆಗಳು ದೊರೆತವು. ಹೆಣ್ಣುಮಕ್ಕಳು ಬೈಲಿಗೆಬರಲು ಹೆದರುತ್ತಿರುವಂತೆ ತಮ್ಮ ಕೃತಿಗಳನ್ನೂ ಬೆಳಕಿಗೆ ಕಳಿಸಲು ಹಿಂಜರಿಯುತ್ತಿರುವ ಕಾಲದಲ್ಲಿ, ನಮಗೆ ಎರಡುನೂರು ಪುಟಗಳ ಮಹಿಲಾಸಾಹಿತ್ಯವು ಒದಗಿತು. ಇಂಥ ಸಾಹಿತ್ಯವು ಇನ್ನೂ ಎಷ್ಟೋ ಹುದುಗಿಕೊಂಡಿರಬೇಕು. ಈ ಸಂಗ್ರಹ ಕಾರ್ಯದ ಅನುಭವದಿಂದ ಹೆಣ್ಣುಮಕ್ಕಳ ಸಾಹಿತ್ಯಕ್ಕೆ ಸಹಾನುಭೂತಿಯ ಪ್ರೋತ್ಸಾಹನವು ದೊರೆತರೆ ಕನ್ನಡಸರಸ್ವತಿಯ ಅಲಂಕಾರಗಳು ಇಮ್ಮಡಿಯಾಗಬಹುದೆಂದು ನಮ್ಮ ಅನಿಸಿಕೆ. ಹದಿಮೂರು

ಈ ಸಂಗ್ರಹದಲ್ಲಿದ್ದ ಎಲ್ಲ ಕತೆಗಳೂ ಹೊಸವು. ಇದುವರೆಗೆ ಎಲ್ಲಿಯೂ ಪ್ರಕಟವಾಗಿಲ್ಲ. "ಬಂಗಾರದ ಬಳೆ" ಎಂಬುದು ಅರವ ಕತೆಯೊಂದರಿಂದ, "ಕೋಸ್ತನ ಹಚ್ಚೆ" ಎಂಬುದು ಜೇಕಬ್ಸರ ಇಂಗ್ಲಿಷ್ ಕತೆಯೊಂದರಿಂದ ರೂಪಾಂತರವಾಗಿವೆ. ಉಳಿದ ಎಲ್ಲ ಕತೆಗಳು ಸ್ವತಂತ್ರವಾಗಿವೆ.

ಇನ್ನು ಈ ಕತೆಗಳ ಜೀವಾಳದಂತಿದ್ದ ಭಾವಗಳನ್ನು ಆ ಕತೆಯ ಮಾತಿನ ಹೊಳಪಿನಲ್ಲಿಯೇ ಬೇರೆಯಾಗಿ ಪ್ರತಿಯೊಂದು ಕತೆಯ ಮೊದಲು ಕೊಟ್ಟಿದ್ದೇವೆ. ಇದಲ್ಲದೆ ಕತೆಗಾತಿಯರ ಪರಿಚಯದ ವಿಷಯ. ಕನ್ನಡದಲ್ಲಿ ಬರೆಯುತ್ತಿದ್ದ ಎಲ್ಲ ಲೇಖಕಿಯರ ಬಗ್ಗೆ ನಮಗೆ ತುಂಬಾ ಅಭಿಮಾನವಿದೆ. ಆ ಅಭಿಮಾನದಿಂದಲೇ ನಾವು ಈ ಕೆಲಸ ಕೈಕೊಂಡುದು. ಅವರ ಪರಿಚಯದಲ್ಲಿ ಅವರ ಕಲೆ ಬೆಳೆಯುತ್ತಿದ್ದ ರೀತಿಯನ್ನೂ ಬೆಳೆಯುವಾಗ ಬರುತ್ತಿರುವ ಎಡರುಗಳನ್ನೂ ಸೂಚಿಸಿದೆ.

ಈ ಸಂಗ್ರಹಕ್ಕೆ ಒಂದು ಮುನ್ನುಡಿಯನ್ನು ಬರೆಯಬೇಕೆಂದು ಕನ್ನಡ ಸಣ್ಣಕತೆಗಳ ಜನಕರಾದ ಶ್ರೀಮಾನ್ ಶ್ರೀನಿವಾಸರನ್ನು ಬೇಡಿಕೊಂಡೆವು. ಅವರು ಸಂತೋಷದಿಂದ ಒಪ್ಪಿಕೊಂಡು ತಮ್ಮ ಅಮೌಲ್ಯವಾದ ಸಮಯವನ್ನು ವೆಚ್ಚಗೊಳಿಸಿ ಒಂದು ಬೆಲೆಯುಳ್ಳ ಮುನ್ನುಡಿಯನ್ನು ಬರೆದುಕೊಟ್ಟಿದ್ದಾರೆ. ಈ ಮುನ್ನುಡಿ ಇನ್ನು ಬರೆಯುವ ನಿವೇದನ

ಸೋದರಿಯರಿಗೆ ರಾಜಮಾರ್ಗ. ಇದರಿಂದ ನಮ್ಮ ಸೋದರಿಯರು ಆವರಿಗೆ ಋಣಿಗಳಾಗಿರಬೇಕು. ನಾವು ಕೊಟ್ಟ ತಾಪವನ್ನು ಸಹಿಸಿ ಅವರು ಈ ಮುನ್ನುಡಿಯನ್ನು ಬರೆದು "ರಂಗವಲ್ಲಿ"ಗೆ ಒಂದು ವಿಶೇಷವಾದ ರಂಗುಕೊಟ್ಟಿದ್ದಾರೆ.

ನಮ್ಮ ಸಂಕಲ್ಪವನ್ನು ಮೂರ್ತಿಗೊಳಿಸಿದ ಈ ಎಲ್ಲ ಕತೆಗಾತಿಯರ ಉಪಕಾರವನ್ನು ಅನಂತವಾಗಿ ಸ್ಮರಿಸುತ್ತೇವೆ. ಈ ಸಂಕಲನವನ್ನು ಅಲಂಕರಿಸಿದ ಮುನ್ನುಡಿಕಾರರಾದ ಮಾನ್ಯಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರ, ಎಂ. ಎ. ಅವರಿಗೆ ನಾವು ಕೃತಜ್ಞತೆಯ ವಂದನೆಗಳನ್ನು ಎಷ್ಟು ಅರ್ಪಿಸಿದರೂ ತಣಿಯೆವು. ಈ ಸಂಗ್ರಹದ ಕಾರ್ಯದ ಹೊಳವಿನಿಂದಲೂ ನಮ್ಮ ಸಹಾಯಕರಾಗಿ ಕೆಲಸ ಪೂರೈಸುವವರೆಗೆ ನಮ್ಮ ಜೊತೆಗಿದ್ದು ದುಡಿದವರು "ಕನ್ನಡ ಕಂದ"ದ ಸಂಪಾದಕರಾದ ಶ್ರೀ. ಮೇವುಂಡಿ ಮಲ್ಲಾರಿಯವರು. ಸಂಗ್ರಹಕಾರ್ಯದಲ್ಲಿ ನೆರವಾದವರು ಮೈಸೂರಿನ ಶ್ರೀ. ಎಚ್. ಸೀತಾರಾಮರಾವ್ ಎಂ. ಎಸ್. ಸಿ. ಅವರು. ನಮ್ಮ ಬೆನ್ನು ಚಪ್ಪರಿಸಿ ಹುರುಪು ಕೊಟ್ಟವರು ಹಿರಿಯರಾದ ಶ್ರೀ. ಬೇಂದ್ರೆಯವರು. ನಮ್ಮಿಂದಾದ ಎಲ್ಲ ತೊಂದರೆಯನ್ನು ಸಹಿಸಿ ಪುಸ್ತಕವನ್ನು ಸಕಾಲಕ್ಕೆ, ಸುಂದರವಾಗಿ ಅಚ್ಚುಹಾಕಿಸಿ ಕೊಟ್ಟವರು "ಸಾಧನ ಮುದ್ರಣಾಲಯ"ದ ಒಡೆಯರಾದ ಶ್ರೀ. ಶೇಷರಾಯರು. ಇವರೆಲ್ಲರಿಗೂ ನಾವು ತುಂಬಾ ಉಪಕೃತರಾಗಿದ್ದೇವೆ.

ಇಷ್ಟೆಲ್ಲ ಜನರ ಸಹಾಯದಿಂದ ರೂಪುಗೊಂಡ ಈ ಕೃತಿ ನಮ್ಮದೆನ್ನುವದು ಹೆಸರಿಗೆ ಮಾತ್ರ. ಇದು ಕನ್ನಡ ಜನಕ್ಕೆ ಹಿತವಾದುದಾದರೆ ಅದರ ಎಲ್ಲ ಯಶ ಮೇಲಿನವರೆಲ್ಲರದು. ಇದು ಕನ್ನಡಿಗರಿಗೆ ಮೆಚ್ಚಿದುದಾದರೆ ಇಂಥದೇ ಇನ್ನೊಂದು ಸಂಗ್ರಹವನ್ನು—ಇದಕ್ಕೂ ಸುಂದರವಾಗಿ ಪ್ರಕಟಿಸುವ ಆಸೆ ನಮಗಿದೆ. ರಸಿಕರಾದ ಉದಾರಕನ್ನಡಿಗರು ನಮ್ಮಿಂದ ಇನ್ನೂ ಹೆಚ್ಚಿನ ಸೇವೆ ಕೊಳ್ಳಲೆಂದು ಪ್ರಾರ್ಥಿಸುತ್ತೇವೆ.

ಹ ದಿ ಸಾ ಲ್ಕ

ಧಾರವಾಡ
ಶಾಲಿವಾಹನ ಶಕ ೧೮೬೫
ನಾಗಪಂಚಮಿ

**ಪ್ರಕಾಶಕರು**

# ರಂಗವಲ್ಲಿ

“ ಇವಳು ಕಾವ್ಯಾಲಂಕಾರ ನಾಟಕಗಳ
ಪವಣಿಗೆಯಿರವ ಬಲ್ಲವಳು ।
ಇವಳ ಸಾಹಿತ್ಯದ ಸವಿಗೆಳಸುತ್ತೆನ್ನ
ಕಿವಿಗಳು ಕದುಂಬುಗೊಂಡಿಹವು ॥
ಪವಣಿಗೆಯೊಪ್ಪೆ ಪುರುಳು ಪೊಗರೇರೆಯುಂ
ಗವಿಸೆಯುಲಂಕಾರಗಳು ।
ಕವಿದು ಪರಿಯೆ ರಸದೊಳ್ಗಂಪು ಗಮ್ಮನೆ
ಕವಿತೆಯೊಂದನು ಪೇಳಿಸಿಂದು ॥ ”

— ಹೊನ್ನಮ್ಮ

# ಇಟ್ಟೆ ಅಕ್ಕಿ

# ಮನುವಿನ ರಾಣಿ

ಸೂಳೆಗೆ ಹೃದಯವಿರಬಾರದೆಂದು ಅವಳ ತಾಯಿ ಹೇಳುತ್ತಿದ್ದಳು. ಅವಳಿಗೆ ಅದು ಇತ್ತು. ಅದು ತಾಯಿಗೆ ಸೇರಲಿಲ್ಲ. ಮನುವಿಗೆ ಮದುವೆ ಮಾಡಿಸಿ ಮಗಳನ್ನು ಕೊಂದಳು ತಾಯಿ! ಮಗಳನ್ನು ಸಾಯಿಸಿ ಮನುವನ್ನು ಕೊಂದಳು ಮಾತಾಯಿ! ಜೀವವಿಲ್ಲದ ಜೀವಿಗಳೆರಡರ ಜೀವನ ಯಾರಿಗೂ ಬೇಡ.

ಕತೆಗಾರ್ತಿ

## ಶ್ರೀಮತಿ ಬಿ. ಟಿ. ಜಿ. ಕೃಷ್ಣ

ಇವರು ಕೊಡಗಿನ ಸುಂಟಿಕೊಪ್ಪದವರು. ಜನ ಮೆಚ್ಚಿನ ಕತೆಗಳನ್ನು ಬರೆವವರಲ್ಲಿ ಇವರ ಗಣನೆಯಾಗಿರುವುದು. ಮೆಚ್ಚಾಗಿಯೂ ಹೆಚ್ಚಾಗಿ ಕತೆ ಬರೆಯುವ ಹೆಣ್ಮಕ್ಕಳ ಎಣಿಕೆಯಲ್ಲಿ ಇವರ ಹೆಸರು ಕಿರುಬೆರಳಿಗೆ ಬರುವುದೆಂದು ಹೇಳಬಹುದು. ಈವರೆಗೆ ಪ್ರಕಟವಾದ ಇವರ ಕತೆಗಳಲ್ಲಿ 'ಕೌಸಲ್ಯಾನಂದನ'ವೆಂಬುದಕ್ಕೆ ಮೊದಲ ತಾಂಬೂಲ ಸಲ್ಲುತ್ತದೆ. ಇವರ ಕತೆಗಳೆಲ್ಲ ಸಾಮಾಜಿಕವಾದುವು. ಎಲ್ಲವುಗಳಲ್ಲಿಯೂ ಸಾಮಾನ್ಯವಾದ ಕಥಾವಸ್ತುವೊಂದು ಹೃದಯಂಗಮವಾದ ಶೈಲಿಯಲ್ಲಿ ವಿಕಸನಹೊಂದಿರುತ್ತದೆ. ಇವರ ಕತೆಗಳಿಗೆ ತರಗತಿಗಳಿರಬಹುದಾದರೂ ಶೈಲಿ ಎಲ್ಲೆಡೆಯಲ್ಲಿಯೂ ಒಂದೇ ಹದಕ್ಕೆ ಬಂದಿರುವುದು. ಆದರೆ ಇವರ ಪತ್ರರೂಪದ ಕತೆಗಳಲ್ಲಿಯು ಶೈಲಿಯ ಬೆಡಗು ಹೆಚ್ಚು. ವ್ಯಂಗವಿನೋದವೊ, ಸ್ವಭಾವವೈಶಿಷ್ಟ್ಯವೊ, ಉಚ್ಚವಿಚಾರವೊ ಇವರ ಕತೆಗಳಲ್ಲಿ ಇಲ್ಲವೆಂದು ತೋರುತ್ತದೆ. ಸಮಾಜದ ನ್ಯೂನಾತಿರೇಕಗಳನ್ನು ಹಾರ್ದಿಕವಾದ ಸರಳಶೈಲಿಯಲ್ಲಿ ಹೇಳುವುವೇ ಬಹುಶಃ ಎಲ್ಲ.

ನನಗೆ ಆ ಊರಿಗೆ ವರ್ಗವಾಗಿ ಬರೇ ಎರಡು ತಿಂಗಳುಗಳಾಗಿದ್ದುವು, ಅಷ್ಟೆ. ಆದಿನ ನನಗೆ ತುಂಬಾ ಕೆಲಸವಿತ್ತು. ಬೆಳಗ್ಗೆ ನಾಲ್ಕು ಗಂಟೆಗೆ ಹೋದವನು ಅದೇ ಆಗ ಮನೆಗೆ ಬಂದಿದ್ದೆ. ನಾನು ಮನೆಯ ಮೆಟ್ಟಿಲುಗಳನ್ನು ಹತ್ತುವಾಗ ಆಸ್ಪತ್ರೆಯ ಗಡಿಯಾರವು ಒಂದು ಹೊಡೆಯಿತು. ಮಕ್ಕಳೂ ಕೆಲಸದವರೂ ಮಲಗಿ ನಿದ್ರೆಮಾಡಿಬಿಟ್ಟಿದ್ದರು.

ಪಾರ್ವತಿ ಮಾತ್ರ ನನ್ನ ಪ್ರತೀಕ್ಷೆಯಲ್ಲೇ ಕೂತಿದ್ದಳು. ಒಳಗೆ ಹೋಗಿ ಬಟ್ಟೆಬದಲಾಯಿಸಿ ಕೈಕಾಲು ತೊಳೆದು ಇನ್ನೇನು ಊಟಕ್ಕೆ ಕೂರಬೇಕು; ಅಷ್ಟರಲ್ಲಿ ಮುಂಬಾಗಿಲನ್ನು ತಟ್ಟುವ ಶಬ್ದ ಕೇಳಿಸಿತು. ಪಾರ್ವತಿಗೆ ರೇಗಿ ಹೋಯ್ತು: "ಥೂ, ಇದೇನಿದು ಬೆಳಗಿನ ಜಾವಕ್ಕೆ ಹೋದವರು ಈಗ ಬಂದಿದ್ದಾರೆ. ಬಂದಿಷ್ಟು ಊಟ ಮಾಡುವುದಕ್ಕೂ ಪುರಸೊತ್ತಿಲ್ಲ-ಅಷ್ಟರಲ್ಲಿ ಬಂದರು ಇನ್ನೊಬ್ಬರು. ಕದ ತಟ್ಟುತ್ತಿರಲಿ; ನಾನೇನೂ ಬಾಗಿಲು ತೆರೆಯುವುದಿಲ್ಲ" ಎಂದಳು. ಹೌದು—ನಾನು ಬೆಳಗಿನಿಂದಲೂ ಹಸಿದಿದ್ದೆ; ಆದರೆ... ಆದರೆ ನನಗೆ ಮನಸ್ಸು ತಡೆಯಲಿಲ್ಲ. "ಹೋಗಲಿ ಬಿಡು ಪಾರ್ವತಿ, ಬಾಗಿಲು ತೆರೆದು ಯಾರೆಂದು ವಿಚಾರಿಸು" ಎಂದೆ. ಅವಳಿಗೆ ಇನ್ನಷ್ಟು ಕೋಪ ಬಂತು: "ನಿಮ್ಮ ದಮ್ಮಯ್ಯ, ಬೆಳಗಿನಿಂದಲೂ ಹೊಟ್ಟೆಗೇನೂ ಇಲ್ಲ. ಮೊದಲು ಊಟ ಮಾಡಿ; ಆಮೇಲೆ ನೋಡೋಣ" ಎಂದಳು. ಈ ಮಧ್ಯೆ ಬಾಗಿಲ ತಟ್ಟುವುದು ಬಹಳ ಜೋರಾಯ್ತು. ಮನುಷ್ಯ ಪ್ರಾಣಿಯೊಂದು ಜೀವನ ಮರಣಗಳ ಮಧ್ಯೆ ಹೊರಳಾಡುತ್ತಿರುವಾಗ ನಾನು ಊಟ ಮಾಡುತ್ತಾ ಕೂತಿರಲೆ? ಎದ್ದು ನಾನೇ ಕದ ತೆರೆಯಲು ಹೋದೆ. ಪಾರ್ವತಿಯ ಕಣ್ಣುಗಳಲ್ಲಿ ನೀರು ತುಂಬಿತು. 'ನಮ್ಮೂರೇ ವಾಸಿಯಾಗಿತ್ತು—ಈ ಹಾಳೂರಿಗೆ ಬರಲಾಗಿ ಊಟಕ್ಕೂ ಸಮಯವಿಲ್ಲ' ಎಂದುಕೊಂಡಳು. ಪಾರ್ವತಿಯ ಕಣ್ಣೀರು ತುಂಬಿದ ಮುಖವನ್ನು ನೋಡಿ ನನ್ನ ಮನಸ್ಸು ನೊಂದರೂ ಆಗ ಅವಳನ್ನು ಸಮಾಧಾನಪಡಿಸುವಂತಿರಲಿಲ್ಲ. ಹೋಗಿ ಕದ ತೆರೆದೆ.

ಕದ ತಟ್ಟಿದವನೊಬ್ಬ ಹುಡುಗ—ಸುಬ್ಬು—ಆ ಊರಿನ ಜಟ್ಟೀ ಬಸವಯ್ಯ. "ಏನೋ" ಎಂದು ಕೇಳಿದೆ. "ರಾಜಮ್ಮಾವ್ರ ಮನೇಲಿ ಬಾಳ ಕಾಯ್ಲೆ ಅಂತೆ. ಈಗ್ಲೇ ಬರ್ಬೇಕಂತ" ಎಂದ. ರಾಜಮ್ಮ! ಅವಳ ಹೆಸರನ್ನು ಕೇಳಿದ ಕೂಡಲೇ ಕದ ತೆರೆಯುವಾಗಿದ್ದ ಸಹಾನುಭೂತಿ, ಕರುಣೆ ಎಲ್ಲೋ ಮಾಯವಾಯ್ತು. "ಬೆಳಿಗ್ಗೆ ಬರುತ್ತೇನೆ. ನಡೆ" ಎಂದೆ. ಅವನು ಹೊರಟುಹೋದ. ಕದಮುಚ್ಚಿ ನಾನೂ ಒಳಗೆ ಹೋದೆ. ಪಾರ್ವತಿ ಊಹಿಸಿದ್ದಂತೆ ನಾನು ಹೊರಟುಹೋಗದೆ ಮರಳಿಬಂದುದರಿಂದ ಅವಳಿಗೂ ಸಮಾಧಾನವಾಯ್ತು. ಊಟಕ್ಕೆ ಬಡಿಸುತ್ತಾ

"ಯಾರು ಬಂದವರು?" ಎಂದು ಕೇಳಿದಳು. "ಸುಬ್ಬು, ರಾಜಮ್ಮನ ಮನೆಗೆ ಕೂಡಲೇ ಬರಬೇಕೆಂದು ಕರೆಯುವುದಕ್ಕೆ" ಎಂದೆ. ರಾಜಮ್ಮನ ಹೆಸರು ಕೇಳಿ ಪಾರ್ವತಿ "ಅವಳಿಗೇನೀಗ ಕೇಡು! ಬೆಳಿಗ್ಗೆ ಹೋದರೆ ಸಾಲದೇನೋ? ಇಷ್ಟಕ್ಕೂ ಸತ್ತುಹೋದರೆ ಭೂಮಿಭಾರವೇ ಕಮ್ಮಿ ಯಾಯ್ತು" ಎಂದಳು.

ರಾಜಮ್ಮ—ಹೆಸರನ್ನು ಕೇಳಿದ ಮಾತ್ರದಿಂದಲೇ ತಿರಸ್ಕರಿಸಲ್ಪಡುತ್ತಿದ್ದ ರಾಜಮ್ಮ–ಸೂಳೆ. ನಾನವಳನ್ನು ಕಣ್ಣಾರೆ ನೋಡಿರಲಿಲ್ಲವಾದರೂ ಅವಳ ವಿಷಯವಾಗಿ ಜನರಾಡಿಕೊಳ್ಳುತ್ತಿದ್ದ ಮಾತುಗಳನ್ನು ಕೇಳಿಯೇ 'ಅವಳು ನಿಜವಾಗಿಯೂ ರಾಕ್ಷಸಿ' ಎಂದೆನಿಸಿಹೋಗಿತ್ತು ನನಗೆ. 'ಅಂಥವಳ ಮನೆಗೆ ಈಗ ಯಾರು ಹೋಗುತ್ತಾರೆ? ಬೆಳಗಿನಿಂದಲೂ ಊಟ ಸಹ ಮಾಡಿಲ್ಲ–ನಾಳೆ ಬೆಳಿಗ್ಗೆ ಹೋದರಾಯಿತು' ಎಂದು ಸಮಾಧಾನ ಮಾಡಿಕೊಂಡು ಮಲಗಿದೆ. ಅಷ್ಟರಲ್ಲಿ ಪುನಃ ಬಾಗಿಲನ್ನು ಬಡ ಬಡನೆ ಬಡಿಯುವ ಶಬ್ದ ಕೇಳಿಸಿತು. ಹೋಗಿ ಬಾಗಿಲು ತೆರೆದೆ. ಸುಬ್ಬು! "ಈಗ್ಲೇ ಬರ್ಬೇಕಂತೆ ಡಾಕ್ಟ್ರೇ, ಬಹಳ ಜೋರಂತೆ. ಕಾಲಿಗೆ ಬಿದ್ದು ಕರ್ಕೊಂಡು ಬಾ ಅಂದ್ರು" ಎಂದ. "ಯಾರಿಗೋ ಕಾಯಿಲೆ?" ಎಂದು ಕೇಳಿದೆ. ಅವನಿಗೆ ಗೊತ್ತಿರಲಿಲ್ಲ. ಅಂತೂ ಕಾಯಿಲೆ ರಾಜಮ್ಮನಿಗಲ್ಲ ಎಂದು ತಿಳಿಯಿತು. ಇನ್ನಾರಿಗೆ? ಯಾರಿಗೇ ಆದರೂ–ರಾಜಮ್ಮನಿಗೇ ಆದರೂ ಹೋಗಿ ನೋಡುವುದು ನನ್ನ ಕರ್ತವ್ಯ. ಅವಳು ಸೂಳೆ ಎಂಬ ಮಾತ್ರಕ್ಕೆ ಅಷ್ಟೊಂದು ಅಲಕ್ಷ್ಯಮಾಡಲು ನನಗೆಲ್ಲಿಯ ಅಧಿಕಾರ? ಸ್ವಲ್ಪ ಹೊತ್ತಿನ ಮೊದಲೇ ನನ್ನ ಕರ್ತವ್ಯವನ್ನು ಅವಳು ಸೂಳೆ ಎಂಬ ನೆಪನದಿಂದ ಬದಿಗೊತ್ತಿ ಸಮಾಧಾನ ಮಾಡಿಕೊಂಡಿದ್ದೆ. ನೆನಸಿಕೊಂಡು ನನಗೇ ನಾಚಿಕೆಯಾಯ್ತು–"ಬರುತ್ತೇನೆ ತಡೆ" ಎಂದು ಹೇಳಿ ಒಳಗೆ ಹೋಗಿ ಬೇಗ ಬೇಗ ಬಟ್ಟೆ ಹಾಕಿಕೊಂಡೆ. ಪಾರ್ವತಿಗೆ ನಿದ್ರೆ ಬಂದುಹೋಗಿತ್ತು. ಔಷಧಿಯ ಪೆಟ್ಟಿಗೆಯನ್ನು ತೆಗೆದುಕೊಂಡು ಹಾಗೆಯೇ ಬಾಗಿಲನ್ನೆಳೆದುಕೊಂಡು ಹೊರಟೆ.

ರಾಜಮ್ಮನ ಮನೆ ನಮ್ಮನೆಗೆ ಸುಮಾರು ಮುಕ್ಕಾಲುಮೈಲು ದೂರದಲ್ಲಿ ಒಂದು ತೋಟದೊಳಗೆ ಒಂಟಿಯಾಗಿತ್ತು. ಅದರ ಹತ್ತಿರ

ಹತ್ತುಹನ್ನೆರಡು ಮಾರು ದೂರದಲ್ಲಿ ಒಂದೆರಡು ಬಡ ಕೂಲಿಯವರ ಗುಡಿಸಲುಗಳಲ್ಲದೆ ಬೇರೆ ಮನೆಗಳಿರಲಿಲ್ಲ. ನಾವು ಹೋಗುವಾಗ ರಾಜಮ್ಮನ ಮನೆಬಾಗಿಲು ತೆರೆದೇ ಇತ್ತು. ಸುಬ್ಬು "ಅಮ್ಮಾವ್ರೇ" ಎಂದು ಕೂಗಿದ. ರಾಜಮ್ಮ ಹೊರಗೆ ಬಂದಳು. ಅದೇ ಮೊಟ್ಟ ಮೊದಲು ನಾನು ರಾಜಮ್ಮನನ್ನು ನೋಡಿದ್ದು. ಅವಳ ವಿಷಯವಾಗಿ ಜನರಾಡುತ್ತಿದ್ದ ಮಾತುಗಳನ್ನು ಕೇಳಿ ರಾಜಮ್ಮ ರಾಕ್ಷಸಿ ಎಂಬ ಭಾವನೆಯಾಗಿಹೋಗಿತ್ತು ನನಗೆ. ಆದರೆ ಅದೇಕೋ–' ವ್ಯಸನದಿಂದ ಬಾಡಿದ್ದ ಅವಳ ಮುಖವನ್ನೂ ಅತ್ತು ಅತ್ತು ಕೆಂಪಾಗಿ ಊದಿಕೊಂಡಿದ್ದ ಅವಳ ಕಣ್ಣುಗಳನ್ನೂ ನೋಡಿ ನನಗೆ ಅತ್ಯಂತ ಕರುಣೆಯುಂಟಾಯಿತು. "ಯಾರಿಗಮ್ಮಾ ಕಾಯಿಲೆ?" ಎಂದು ಕೇಳಿದೆ. ರಾಜಮ್ಮ ಪ್ರತ್ಯುತ್ತರ ಕೊಡದೆ ನನ್ನನ್ನು ಒಳಗೆ ಕರೆದುಕೊಂಡು ಹೋದಳು. ಅಲ್ಲೊಂದು ಕೋಣೆಯಲ್ಲಿ ಮಂಚದ ಮೇಲೊಬ್ಬನು ಮಲಗಿದ್ದ. ರಾಜಮ್ಮ ಆತನ ಕಡೆಗೆ ಕೈತೋರಿದಳು. ಹತ್ತಿರ ಹೋಗಿ ನೋಡಿದೆ. ಸತ್ತ ಹೆಣದ ಮುಖದಂತಿತ್ತು ಅವನ ಮುಖ. ಕಣ್ಣುಗಳನ್ನು ಬಿಟ್ಟುಕೊಂಡೇ ಇದ್ದರೂ ಆ ಕಣ್ಣುಗಳಲ್ಲಿ ಜೀವನದ ಬೆಳಕಿದ್ದಂತೆ ತೋರಲಿಲ್ಲ. ಬಗ್ಗಿ ಆತನ ಕೈಹಿಡಿದು ನೋಡಿದೆ. ಬೆಂಕಿಯಂತೆ ಸುಡುತ್ತಿತ್ತು ಕೈ. ಜ್ವರದ ತಾಪದಿಂದ ಅವನಿಗೆ ಪ್ರಜ್ಞೆ ಇರಲಿಲ್ಲ. ನೋಡಿದೊಡನೆಯೇ ಆತ ಬದುಕುವಂತಿಲ್ಲವೆಂದು ನನಗೆ ತಿಳಿಯಿತು. ರಾಜಮ್ಮ ಅವನ ಕಾಲ ಹತ್ತಿರ ತಲೆಯನ್ನಿಟ್ಟುಕೊಂಡು ಶೂನ್ಯದೃಷ್ಟಿಯಿಂದ ನನ್ನ ಕಡೆ ನೋಡುತ್ತಿದ್ದಳು. ನಾನು ಎಷ್ಟೋ ಜನರು ಸಾಯುವುದನ್ನು ನೋಡಿದ್ದೇನೆ. ಅದೆಷ್ಟೋ ಜನರು ಎದೆ ಎದೆ ಬಡಿದುಕೊಂಡು ಅಳುವ ಕರುಣಕ್ರಂದನವನ್ನೂ ಕೇಳಿದ್ದೇನೆ. ಆದರೆ ಅದಾವ ದೃಶ್ಯಗಳೂ ರಾಜಮ್ಮನ ಮೂಕ ರೋದನದಷ್ಟು ವ್ಯಥೆಯನ್ನುಂಟುಮಾಡಿರಲಿಲ್ಲ.

ಸ್ವಲ್ಪ ಹೊತ್ತಿನ ಹಿಂದೆ ನಾನು ರಾಜಮ್ಮನನ್ನು ನೋಡಿ ಸಹ ಇರಲಿಲ್ಲ. ಅವಳ ವಿಷಯದಲ್ಲಿ ತಿರಸ್ಕಾರವಿತ್ತು; ಸತ್ತರೂ ಸಾಯಲಿ ಎಂಬ ಭಾವನೆ ಇತ್ತು. ಒಂದು ಸಾರಿ ಅವಳ ಅಳುವ ಮುಖವನ್ನು ನೋಡಿದ ಮಾತ್ರದಿಂದ ನನಗವಳ ವಿಷಯದಲ್ಲಿದ್ದ ಎಲ್ಲ ಭಾವನೆಗಳೂ

ಮಾಯವಾಗಿ ಅಸೀಮಕರುಣೆಯೊಂದು ಮಾತ್ರ ಅದೇಕೆ ಉಳಿಯಿತೋ ಹೇಳಲಾರೆ. ಅವಳ ಪ್ರಾಯವೇನೂ ಹೆಚ್ಚಾಗಿದ್ದಂತೆ ತೋರಲಿಲ್ಲ. ನನ್ನ ಮಗಳು ಶಾಂತಿಗಿಂತ ಒಂದೆರಡು ವರ್ಷಕ್ಕೆ ಹಿರಿಯಳೋ ಏನೋ. ಇಷ್ಟೊಂದು ಚಿಕ್ಕ ಪ್ರಾಯದಲ್ಲೇ ಇಂತಹ ಅವಸ್ಥೆ! ಹೆಸರಾದ ಸೂಳೆ ಎಂಬ ಕೀರ್ತಿ!!

ಮಲಗಿದ್ದ ಮನುಷ್ಯ ಹೊರಳಾಡಿದ. ನಾನು ಕುಡಿಸಿದ ಔಷಧಿಯ ಪ್ರಭಾವದಿಂದ ಅವನನ್ನು ಬದುಕಿಸುವುದು ಅಸಾಧ್ಯವಾದರೂ ಅವನಿಗೆ ಸ್ಮೃತಿ ಬರುವ ಸಂಭವವಿತ್ತು. ಕಾಲದಿಸೆಯಲ್ಲಿ ಕುಳಿತಿದ್ದ ರಾಜಮ್ಮ ಎದ್ದು ಬೆವರುತ್ತಿದ್ದ ಅವನ ಮುಖವನ್ನು ಒರಸತೊಡಗಿದಳು. ಆತನ ತುಟಿ ಅಲುಗಾಡಿತು. ಸ್ವಲ್ಪ ನೀರನ್ನು ಕುಡಿಸುವಂತೆ ಹೇಳಿದೆ. ಅವಳು ಒಂದೆರಡು ಚಮಚ ನೀರನ್ನು ಕುಡಿಸುತ್ತಲೆ ಅವನು ಬಹು ಮೆಲ್ಲಗೆ "ರಾಣಿ" ಎಂದ. ರಾಜಮ್ಮ ನನ್ನ ಕಡೆಗೊಮ್ಮೆ ಕೃತಜ್ಞತೆಯಿಂದ ನೋಡಿ, "ಏನು ಮನು?" ಎಂದಳು. ಪಾಪ, ಅವಳಿಗೆ ಗೊತ್ತಿರಲಿಲ್ಲ–ಆರುವ ಮೊದಲು ದೀಪ ಜೋರಾಗಿ ಉರಿಯುವುದೆಂದು. "ರಾಣೀ, ರಾಣೀ, ರಾಣೀ" ಎಂದು ಕೂಗುತ್ತ ಆತ ಅವಳ ಕೈಗಳನ್ನು ಹಿಡಿದು ಕೊಂಡ. "ಇಲ್ಲೆ ಇದ್ದೇನೆ, ಮನು ಏನು?" ಎಂದು ರಾಜಮ್ಮ ಕೇಳಿ ದಳು. ಪುನಃ ಇನ್ನೊಮ್ಮೆ "ರಾಣೀ" ಎಂದು ಜೋರಾಗಿ ಚೀರಿದ ಆತ. ಆಯ್ತು ಅದೇ ಅಂತ್ಯ.

ಬೆಳಗಿನ ಹತ್ತುಗಂಟೆಯಾಗಿತ್ತು ಮರುದಿನ ನಾನು ಮನೆಗೆ ಹೋಗುವಾಗ. ಮಕ್ಕಳಿಬ್ಬರೂ ಸ್ಕೂಲಿಗೆ ಹೋಗಿದ್ದರು. ಪಾರ್ವತಿ ಹೋದೊಡನೆಯೇ "ಎಲ್ಲಿಗೆ ಹೋಗಿದ್ರಿ? ರಾತ್ರಿನೇ ಹೋದ್ರೋ, ಬೆಳಗಾಗಿತ್ತೋ? ಯಾರಿಗೆ ಕಾಯ್ಲೆ?" ಎಂದು ಮುಂತಾಗಿ ಪ್ರಶ್ನೆಗಳ ಮಳೆಯನ್ನೇ ಸುರಿಸಿಬಿಟ್ಟಳು. ಆದರೆ ಆಗ ಅವಳ ಪ್ರಶ್ನೆಗಳಿಗೆ ಪ್ರತ್ಯು ತ್ತರವನ್ನು ಕೊಡುವ ಸ್ಥಿತಿಯಲ್ಲಿರಲಿಲ್ಲ ನನ್ನ ಮನಸ್ಸು. ಹಿಂದಿನ ದಿನದ ಆ ರೋಗಿ, ಕೆದರಿದ ಕೂದಲಿನ ಊದಿದ ಕಣ್ಣುಗಳ ಬಾಡಿದ ಮುಖದ ರಾಜಮ್ಮ, ಅವಳ ಮೂಕರೋದನ ಎಲ್ಲಾ ಕಣ್ಣುಮುಂದೆ ಕಟ್ಟಿದಂ ತಿತ್ತು. ನನ್ನಿದಿರು ಪಾರ್ವತಿಯೇ ನಿಂತಿದ್ದರೂ ನನ್ನ ಕಣ್ಣುಗಳಿಗೆ ರಾಜಮ್ಮನ ಬಾಡಿ ಬೆಂಡಾಗಿದ್ದ ಆ ಮುಖ ಕಾಣಿಸುತ್ತಿತ್ತು.

ನಾನು ಮೂಕನಂತೆ ಬೆಪ್ಪಾಗಿ ನಿಂತಿರುವುದನ್ನು ನೋಡಿ ಪಾರ್ವತಿಗೆ ಆಶ್ಚರ್ಯವೇ ಆಗಿರಬೇಕು. ಹಿಂದಿನ ದಿನದ ನನ್ನ ವಿಪರೀತದ ಕೆಲಸದಿಂದಲೇ ನಾನು ಹಾಗಿರುವುದೆಂದು ಅವಳು ಬಲು ನೊಂದುಕೊಂಡಳು. "ನಿನ್ನೆ ಇಡೀ ದಿನ ನಿದ್ರೆಯಿಲ್ಲ; ಹೊತ್ತಿಗೆ ಸರಿಯಾಗಿ ಊಟವಿಲ್ಲ. ಇನ್ನಾದರೂ ಫಲಾಹಾರ ಮಾಡಿ ವಿಶ್ರಾಂತಿತಕ್ಕೊಳ್ಳಿ" ಎಂದು ಕಾಫಿ ತಿಂಡಿಯನ್ನು ತಂದಿಟ್ಟುಕೊಂಡು ಬಲವಂತಪಡಿಸತೊಡಗಿದಳು. "ಈಗೇನೂ ಬೇಡ ಪಾರ್ವತಿ. ಸ್ವಲ್ಪ ಮಲಗಿ ನಿದ್ರೆಮಾಡಿದರೆ ಎಲ್ಲಾ ಸರಿಯಾಗುತ್ತೆ" ಎಂದು ಬಟ್ಟೆಯನ್ನು ಸಹ ಬದಲಾಯಿಸದೆ ಹಾಗೆಯೇ ಬಿದ್ದುಕೊಂಡೆ. ನಾನು ನಿದ್ರೆ ಮಾಡಲೆಳಸುವೆನೆಂದೆಣಿಸಿ ಪಾರ್ವತಿ ಹೊರಗೆ ಹೊರಟಳು. "ಇಲ್ಲಿ ಬಂದು ಕೂತ್ಕೋ ಪಾರ್ವತಿ" ಎಂದೆ. ಪಾರ್ವತಿ ನನ್ನ ಹತ್ತಿರ ಬಂದು ಕುಳಿತಳು. "ಇವತ್ತು ನಿಮಗೇನಾಗಿದೆ" ಎಂದು ಕೇಳುವಂತಿತ್ತು ಪಾರ್ವತಿಯ ಪ್ರಶ್ನಾಸೂಚಕ ಮೌನ ದೃಷ್ಟಿ. ನಾನವಳಿಗೆ ಹಿಂದಿನ ರಾತ್ರಿ ರಾಜಮ್ಮನ ಮನೆಯಲ್ಲಿ ನಡೆದುದೆಲ್ಲವನ್ನೂ ಹೇಳಿದೆ. ನನ್ನ ಮಾತುಗಳನ್ನು ಕೇಳಿ ಪಾರ್ವತಿ "ಸತ್ತವನು ಯಾರು? ರಾಜಮ್ಮನಿಗೆ ಏನಾಗಬೇಕು?" ಎಂದು ಕೇಳಿದಳು. ಅಷ್ಟರವರೆಗೂ ನನಗಾ ವಿಷಯ ಹೊಳೆದಿರಲಿಲ್ಲ. ಸತ್ತವನು ಯಾರು? ರಾಜಮ್ಮನಿಗೆ ಅಷ್ಟೊಂದು ವ್ಯಸನವನ್ನುಂಟುಮಾಡಲು ಅವನಿಗೂ ಅವಳಿಗೂ ಏನು ಸಂಬಂಧ? ಎಂದು ನನಗೂ ಈಗ ಎನಿಸಿತು. ಪಾರ್ವತಿಗೆ ರಾಜಮ್ಮನ ಮೇಲೆ ಬಹಳ ಸಂದೇಹ: 'ಎಲ್ಲಾದರೂ ರಾಜಮ್ಮ ಅವನನ್ನು ವಿಷಹಾಕಿ ಕೊಂದಿರಬಹುದೇ' ಎಂತ. ಒಂದೇ ಒಂದು ದಿನದ ಹಿಂದೆ ಪಾರ್ವತಿಯಂತೆಯೇ ನನಗೂ ಸಂದೇಹ ಉಂಟಾಗುತಿತ್ತು. ರಾಜಮ್ಮನನ್ನೊಂದು ಸಾರಿ ನೋಡಿದ ಮೇಲೆ ನನ್ನ ಆ ತರದ ಭಾವನೆಗಳೆಲ್ಲಾ ಬದಲಾಗಿಹೋಗಿದ್ದವು. ಅದರಿಂದ ಅವಳ ವಿಷಯದಲ್ಲಿ ಪಾರ್ವತಿಯ ಸಂಶಯದ ಮಾತುಗಳನ್ನು ಕೇಳಿ ನನಗೆ ಕೋಪಬಂತು. "ಸುಮ್ಮನಿರು ಪಾರ್ವತಿ" ಎಂದುಬಿಟ್ಟೆ. ನನ್ನ ಸ್ವರ ಕಠೋರವಾಗಿದ್ದಿರಬೇಕು. ಸಿಟ್ಟಿನಿಂದ ಪಾರ್ವತಿಯ ಕಣ್ಣುಗಳಲ್ಲಿ ನೀರು ತುಂಬಿತು. ಅವಳ ಮುಖವನ್ನುನೋಡಿ ನನ್ನ ಕಠೋರತೆಗಾಗಿ ನಾಚಿಕೆಯಾಯ್ತು.

ಅವಳನ್ನು ಸಮಾಧಾನಪಡಿಸುತ್ತ "ರಾಜಮ್ಮ ವಿಷಹಾಕಿ ಕೊಲ್ಲುವಂಥ ರಾಕ್ಷಸಿಯಂತೆ ತೋರುವುದಿಲ್ಲ ಪಾರ್ವತಿ. ನಮ್ಮ ಶಾಂತಿಗಿಂತ ಎಲ್ಲಾದರೂ ಒಂದೆರಡು ವರ್ಷಕ್ಕೆ ದೊಡ್ಡವಳಾಗಿರಬೇಕು. ಪಾಪ, ಅವಳನ್ನು ನೋಡುವಾಗ ಬಹಳ ಮರುಕವಾಗುತ್ತೆ. ಜನರಿಗೇನು, ಸುಮ್ಮನೆ ಏನಾದರೂ ಹೇಳುತ್ತಿರುತ್ತಾರೆ" ಎಂದು ಹೇಳಿದೆ. ಆದರೆ ಪಾರ್ವತಿಗೆ ರಾಜಮ್ಮನ ಮೇಲಿನ ಸಂದೇಹವು ಸಂಪೂರ್ಣವಾಗಿ ದೂರವಾದಂತೆ ತೋರಲಿಲ್ಲ. ಸತ್ತವನು ಹಣಗಾರನಾಗಿರಬಹುದು— ಅವನ ಹಣಕ್ಕಾಗಿ ಅವನನ್ನು ಕೊಂದಿರಬಹುದು— ಈಗ ವ್ಯಸನವನ್ನು ನಟಿಸಿ ಪಾರಾಗಲು ಯತ್ನಿಸುತ್ತಿದ್ದಾಳೆ ಎಂದು ಪಾರ್ವತಿಯ ಊಹನೆ.

ಆ ದಿನ ನಾನು ಆಸ್ಪತ್ರೆಗೆ ಹೋಗಲಿಲ್ಲ. ವಿಶ್ರಾಂತಿಯನ್ನು ತೆಗೆದುಕೊಳ್ಳುವ ನೆವನದಿಂದ ಹಾಸಿಗೆಯ ಮೇಲೆಯೇ ಹೊರಳಾಡುತ್ತಿದ್ದೆ. ನಿದ್ರೆ ಮಾತ್ರ ಎಷ್ಟೆಷ್ಟು ಪ್ರಯತ್ನಿಸಿದರೂ ಬರಲಿಲ್ಲ. ಕೊನೆಗೆ ಸಾಯಂಕಾಲ ಸ್ವಲ್ಪ ಹೊರಗೆ ಹೋಗಿ ತಿರುಗಾಡಿಕೊಂಡಾದರೂ ಬರೋಣ ಎಂದು ಹೊರಟೆ. ನನಗೆ ತಿಳಿಯದಂತೆಯೇ ಕಾಲುಗಳು ನನ್ನನ್ನು ರಾಜಮ್ಮನ ಮನೆಯ ಕಡೆಗೆ ಎಳೆದುಕೊಂಡು ಹೋದುವು. ಬಾಗಿಲು ತೆರೆದಿತ್ತು. ಒಳಗೆ ಹೋದೆ. ಹಿಂದಿನ ದಿನ ರೋಗಿಯು ಮಲಗಿದ್ದ ಮಂಚದ ಹತ್ತಿರ ನೆಲದಮೇಲೆ ಕುಳಿತುಕೊಂಡು ನಟ್ಟ ದೃಷ್ಟಿಯಿಂದ ಬಾಗಿಲಕಡೆ ನೋಡುತ್ತಿದ್ದಳು ರಾಜಮ್ಮ. ಅದೇ ಬಾಗಿಲಿಗಾಗಿ ನಾನು ಒಳಗೆ ಹೋಗಿದ್ದರೂ ನನ್ನನ್ನವಳು ನೋಡಿದಂತೆ ತೋರಲಿಲ್ಲ. ನನಗವಳ ಸ್ಥಿತಿಯನ್ನು ನೋಡಿ ಬಹಳ ಕಳವಳವಾಯ್ತು. ಹೆಣದ ದಹನವಾಗಿತ್ತು— ಈಗ ಅವಳೊಬ್ಬಳೇ ಆ ಮನೆಯಲ್ಲಿ. ಸೂಳೆಯ ಜೊತೆಗೆ ಹೋಗುವವರು ಯಾರು? ಪಾರ್ವತಿಯನ್ನಾದರೂ ಜೊತೆಯಲ್ಲಿ ಕರೆತರಬೇಕಾಗಿತ್ತು ಎನ್ನಿಸಿತು ನನಗೆ. ಹಿಂದಿನ ದಿನ ಯಾರಾದರೂ ನನ್ನೊಡನೆ ರಾಜಮ್ಮನ ಮನೆಗೆ ನನ್ನ ಹೆಂಡತಿಯನ್ನು ಕರೆದುಕೊಂಡು ಹೋಗೆಂದಿದ್ದರೆ ನಾನವರೊಡನೆ ಖಂಡಿತವಾಗಿಯೂ ಜಗಳಾಡಿಬಿಡುತ್ತಿದ್ದೆ. ರಾಜಮ್ಮನನ್ನು ನೋಡಿದಮೇಲೆ ಆ ತರದ ಭಾವನೆಗಳೇಕೋ ಮಾಯವಾಗಿ ಹೋಗಿದ್ದವು. ಹಿಂದೆ ನಾನವಳ ವಿಷಯವಾಗಿ ನೆನೆಸಿಕೊಂಡುದನ್ನೆಲ್ಲಾ ಯೋಚಿಸಿಕೊಂಡಾಗ ನನ್ನಮೇಲೆ ನನಗೇ ಧಿಕ್ಕಾರ ಉಂಟಾಗುತ್ತಿತ್ತು.

ಅವಳಿಗೆ ನಾನು ಹೋದದ್ದು ತಿಳಿಯಲಿಲ್ಲ. "ರಾಜಮ್ಮಾ" ಎಂದು ಕೂಗಿದೆ. ಬೇರೆ ಯಾವುದನ್ನೋ ನೋಡುತ್ತಿದ್ದವಳು ಫಕ್ಕನೆ ತಿರುಗುವಂತೆ ನನ್ನ ಮಾತು ಕೇಳಿ ಅವಳು ತಿರುಗಿದಳು. ಮೊದಮೊದಲು ನಾನು ಯಾರೆಂತ ಅವಳಿಗೆ ಗುರುತು ಸಿಕ್ಕಿದಂತೆ ತೋರಲಿಲ್ಲ. ಅವಳನ್ನು ನಾನೆಷ್ಟೋ ಸಮಾಧಾನಪಡಿಸಲು ಯತ್ನಿಸಿದೆ. ಅವಳು ಅಳುತ್ತಿರಲಿಲ್ಲವಾದರೂ ನನ್ನ ಮಾತುಗಳಿಂದ ಅವಳಿಗೆ ಸಮಾಧಾನವಾದಂತೆ ತೋರಲಿಲ್ಲ. ಕತ್ತಲಾಗುತ್ತಬಂದಿತ್ತು. ಅವಳೊಬ್ಬಳೇ ಆ ಮನೆಯಲ್ಲಿ. ಆದರೆ ನಾನೇನೂ ಮಾಡುವಂತಿರಲಿಲ್ಲ. ಕೊನೆಗೆ ಯಾರನ್ನಾದರೂ ಜೊತೆಗೆ ಕಳುಹಿಸುತ್ತೇನೆಂದು ಹೇಳಿ ಹೊರಟೆ. ಬಾಯಲ್ಲಿ ಹೇಳುವಷ್ಟು ಸುಲಭವಾಗಿರಲಿಲ್ಲ ರಾಜಮ್ಮನ ಮನೆಗೆ ಜನರನ್ನು ಕಳುಹಿಸುವುದು. ಅಂತೂ ಕೊನೆಗೆ ನಮ್ಮನೆಯ ಕೆಲಸದವಳನ್ನು ಆ ರಾತ್ರಿಯ ಮಟ್ಟಿಗೆ ಅಲ್ಲಿಗೆ ಹೋಗಲು ಒಪ್ಪಿಸಿದೆ. ಶಾಂತಿ ತಾನೂ ಅವಳೊಡನೆ ಹೋಗುತ್ತೇನೆಂದಳು. ನನ್ನ ಆಕ್ಷೇಪಣೆ ಇಲ್ಲದಿದ್ದರೂ ಪಾರ್ವತಿ ಅವಳನ್ನು ಕಳುಹಿಸಲು ಒಪ್ಪಲಿಲ್ಲ.

ಎರಡು ದಿನಗಳಿಂದ ನಿದ್ರೆ ಸರಿಯಾಗಿಲ್ಲದುದರಿಂದ ಆ ದಿನ ನಿದ್ರೆ ಚೆನ್ನಾಗಿ ಬಂದುಹೋಗಿತ್ತು ನನಗೆ. ಪಾರ್ವತಿಯೂ ಎಚ್ಚರಗೊಳಿಸಿರಲಿಲ್ಲ. ಆದರಿಂದ ಆ ದಿನ ನಾನು ಏಳುವಾಗ ಎಂಟು ಹೊಡೆದುಹೋಗಿತ್ತು. ಆಸ್ಪತ್ರೆಗೆ ಹೋಗಲು ಹೊತ್ತಾಗುವುದೆಂದು ಅವಸರವಾಗಿ ಹೊರಟಿದ್ದೆ. ಗೇಟನ್ನು ದಾಟುವಾಗ ರಾತ್ರಿ ರಾಜಮ್ಮನ ಮನೆಗೆ ಹೋಗಿದ್ದ ನಮ್ಮ ಕೆಲಸದವಳು ಇದಿರಾಗಿ ಬಂದಳು. ಅವಸರದಲ್ಲಿ ರಾಜಮ್ಮನ ಸುದ್ದಿಯೇ ಮರೆತುಹೋಗಿತ್ತು ನನಗೆ. ಅವಳನ್ನು ನೋಡಿ ರಾಜಮ್ಮ ಹೇಗಿದ್ದಾಳೆ ಎಂದು ವಿಚಾರಿಸಿದೆ. ತಾನು ಬರುವಾಗ ಇನ್ನೂ ಎದ್ದಿರಲಿಲ್ಲವೆಂದೂ ನಿದ್ರೆ ಮಾಡುತ್ತಾಳೆಂದೂ ಹೇಳಿ ಅವಳು ತನ್ನ ಕೆಲಸಕ್ಕೆ ಹೊರಟುಹೋದಳು.

ಆ ದಿನ ನನಗೂ ಸ್ವಲ್ಪ ಹೆಚ್ಚು ಕೆಲಸವಿತ್ತು. ಅದೇ ಮನೆಗೆ ಊಟಕ್ಕೆ ಬರುವಾಗ ನಾಲ್ಕುಗಂಟೆಯಾಗಿತ್ತು. ಊಟವಾದ ಮೇಲೆ ನಾನೂ ಪಾರ್ವತಿಯೂ ಮಾತಾಡುತ್ತ ಕುಳಿತಿರುವಾಗ ಮಧ್ಯಾಹ್ನದ

ಟಪ್ಪಾಲಿನಲ್ಲಿ ಬಂದ ಒಂದು ಕಾಗದವನ್ನು ಪಾರ್ವತಿ ಕೊಟ್ಟಳು. ಕಾಗದವನ್ನು ಬಿಡಿಸಿದೆ. ಅಕ್ಷರಗಳು ನನಗೆ ಪರಿಚಿತವಾಗಿರಲಿಲ್ಲ. ಯಾರ ಕಾಗದವಿರಬಹುದೆಂದು ಕುತೂಹಲದಿಂದ ಕೊನೆಯನ್ನು ನೋಡಿದೆ. ರಾಜಮ್ಮ! ನನಗೆ ತುಂಬಾ ಆಶ್ಚರ್ಯವಾಯ್ತು. ರಾಜಮ್ಮ ನನಗೆ ಬರೆಯುವಂತಹ ವಿಷಯವೇನು! ಆತುರದಿಂದ ಓದತೊಡಗಿದೆ:

"ಡಾಕ್ಟ್ರೇ, ನನ್ನಂತವಳ ಮೇಲೆ ಜನರಿಗೆ ಕರುಣೆ ಇರುವುದು ಅಪರೂಪ. ನನ್ನಂತವರಿಗೆ ಕಷ್ಟಬಂದಾಗ ಸಹಾಯ ಮಾಡುವುದು ಸಹ ಮನುಷ್ಯಧರ್ಮಕ್ಕೆ ವಿರೋಧವೆಂದು ಭಾವಿಸುವವರೇ ಹೆಚ್ಚು. ಇಷ್ಟು ದಿನ–ಈಗ ನಾಲ್ಕು ವರ್ಷ ನಾನು ಯಾರಿಂದಲೂ ಸಹಾಯವನ್ನಾಗಲಿ ಸಹಾನುಭೂತಿಯನ್ನಾಗಲಿ ಅಪೇಕ್ಷಿಸಿದವಳಲ್ಲ. ಮೊನ್ನೆ ಮಗುವಿಗೆ ಒಂದೇ ಸಾರಿ ಜ್ವರ ಜೋರಾಯಿತು.

"ಸುಬ್ಬು ವಿನಾ ನನ್ನ ಮನೆಯ ಕಡೆಗೆ ಮತ್ತಾರೂ ಸುಳಿಯುವುದಿಲ್ಲ. ಅವನನ್ನೇ ಕಳುಹಿಸಿದೆ ಡಾಕ್ಟರನ್ನು ಕರೆದುಕೊಂಡು ಬರುವುದಕ್ಕೆ" ತಾವು ಮನೆಯಲ್ಲಿರಲಿಲ್ಲ. . . . .ರ ಮನೆಗೆ ಕಳುಹಿಸಿದೆ. ಅವರು ನಿರ್ದಾಕ್ಷಿಣ್ಯವಾಗಿ ಬರುವುದಿಲ್ಲ ಎಂದು ಹೇಳಿ ಕಳುಹಿಸಿಬಿಟ್ಟರು. ಪುನಃ ನಿಮಗೇ ಹೇಳಿಕಳುಹಿಸಿದೆ. ನೀವು ಬೆಳಗ್ಗೆ ಬರುವೆನೆಂದುಬಿಟ್ಟಿರಿ. ಈ ಮಧ್ಯೆ ಮಗುವಿಗೆ ನಿಮಿಷ ನಿಮಿಷಕ್ಕೆ ಜೋರಾಗುತ್ತಿತ್ತು. ಕಾಲಿಗೆ ಬಿದ್ದಾದರೂ ಕರೆದುಕೊಂಡು ಬಾ ಎಂದು ತಿರುಗಿ ಸುಬ್ಬುವನ್ನು ಕಳುಹಿಸಿದೆ. ನಿಮಗೇನೋ ದಯೆ ಬಂತು, ನೀವು ಬಂದಿರಿ. ಆದರೆ ಮಗುವನ್ನು ಇಟ್ಟುಕೊಳ್ಳುವ ಭಾಗ್ಯ ನನಗಿರಲಿಲ್ಲ. ಅವನು ಹೊರಟುಹೋದ.

"ನಾನು ಯಾರು–ಮಗು ಯಾರು? ನಮ್ಮನಮಗೆ ಸಂಬಂಧವೇನು? ಎಂದು ಮುಂತಾಗಿ ನೀವು ಯೋಚಿಸಬಹುದು. ನನ್ನ ವಿಷಯವಾಗಿ ಜನರಾಡಿಕೊಳ್ಳುವ ಮಾತುಗಳನ್ನೂ ನೀವು ಕೇಳಿರಬಹುದು. ಹೌದು. ನನ್ನ ತಾಯಿ ಸೂಳೆಯಾಗಿದ್ದಳು. ನಾನೂ ಅದೇ ವೃತ್ತಿಗಾಗಿ ತಯಾರುಮಾಡಲ್ಪಟ್ಟಿದ್ದೆ. ನನ್ನ ತಾಯಿಯು ನನ್ನಿಂದ ತುಂಬ ಹಣ ಸಂಪಾದಿಸಲು ಬಯಸುತ್ತಿದ್ದಳು. ಅವಳ ಬಯಕೆಯೂ ನಿರರ್ಥಕವಾಗುವಂತಿರ

ಲಿಲ್ಲ. ಏಕೆಂದರೆ ಅನೇಕ ಗಣ್ಯಮಾನ್ಯ ಧನಿಗಳು ನನ್ನನ್ನು ಮೆಚ್ಚಿ ಮನಸೋತಿದ್ದರು. ಆದರೆ ಮನುವಿನಿಂದಾಗಿ ನನ್ನ ತಾಯಿಯ ಆಶೆ ನಿರಾಶೆಯಾಗಬೇಕಾಯಿತು. ಮನು—ಮೋಹನ ಎಂತ ಅವನ ಹೆಸರು—ಭಾಗ್ಯವಂತರ ಒಬ್ಬನೇ ಮಗ. ಚಿಕ್ಕಂದಿನಲ್ಲೇ ತಂದೆತಾಯಿಯರನ್ನು ಕಳೆದುಕೊಂಡಿದ್ದುದರಿಂದ ಹೇಳುವವರು ಕೇಳುವವರು ಯಾರೂ ಇರಲಿಲ್ಲ ಅವನಿಗೆ. ಒಂದು ದಿನ ನನ್ನ ತಾಯಿಯ ಹಳೆಯ ಸ್ನೇಹಿತನೊಬ್ಬನು ಅವನನ್ನು ನಮ್ಮನೆಗೆ ಕರೆದುಕೊಂಡು ಬಂದನು. ಅಂದಿನಿಂದ ಯಾವಾಗಲೂ ಮನು ನಮ್ಮನೆಗೆ ಬರತೊಡಗಿದ ನನಗಾಗಿ. ಸೂಳೆಯರಿಗೆ ಹೃದಯವಿರಬಾರದೆಂದು ನನ್ನ ತಾಯಿ ಹೇಳಿಕೊಟ್ಟಿದ್ದರೂ ಮನುವನ್ನು ನಾನು ಪ್ರೀತಿಸತೊಡಗಿದೆ. ಆತನೂ ನನ್ನನ್ನು ಪ್ರೀತಿಸುತ್ತಿದ್ದ. ಮನುವಿನ ಮತ್ತು ನನ್ನ ವ್ಯವಹಾರ ಗಳು ನನ್ನ ತಾಯಿಗೆ ಸರಿಬೀಳುತ್ತಿರಲಿಲ್ಲ. ಈ ಮಧ್ಯೆ ಮನುವಿನ ಹಣಕಾಸೆಲ್ಲಾ ನಮ್ಮ ಪೆಟ್ಟಿಗೆಗೆ ಸೇರಿಹೋಗಿತ್ತು. ಆದರಿಂದ ಮುಂದೆ ಅವನಿಂದ ನನ್ನ ತಾಯಿಗೆ ಪ್ರಯೋಜನವಾಗುವಂತಿರಲಿಲ್ಲ.

"ಆಕಸ್ಮಾತ್ತಾಗಿ ಮನು ನಮ್ಮನೆಗೆ ಬರುವುದು ನಿಂತುಹೋಯ್ತು. ನಾನು ತಾಯಿಯನ್ನು ವಿಚಾರಿಸಿದಾಗ ಅವನು ಮದುವೆಯಾಗಿರುವನೆಂದು ಹೇಳಿದಳು. ಮನುವಿನ ಮದುವೆಯ ಮಾತು ಕೇಳಿ ನನಗೆ ಬಹಳ ದುಃಖವಾಯ್ತು. ಒಂದೆರಡು ತಿಂಗಳು ಪ್ರಾಣಾಂತಿಕವಾದ ಕಾಯಿಲೆಯಲ್ಲಿ ಮಲಗಿಹೋದೆ. ಆಗಲೇ ನಾನು ಏಕೆ ಸಾಯಲಿಲ್ಲವೋ! ಅಂತೂ ನನಗೆ ಜ್ವರ ಬಿಟ್ಟಾಗ ನಮ್ಮ ಕೆಲಸದವಳ ಮೂಲಕ ಮನು ಮದುವೆಯಾಗಲಿಲ್ಲವೆಂದೂ ನಾನು ಸತ್ತುಹೋದೆನೆಂದು ನಮ್ಮ ತಾಯಿ ಹುಟ್ಟಿಸಿದ ವರ್ತಮಾನದಿಂದ ಅವನು ಅರೆಹುಚ್ಚನಾಗಿರುವನೆಂದೂ ತಿಳಿಯಿತು. ಅದೇ ದಿನ ರಾತ್ರಿ ನಾನು ಮನೆ ಬಿಟ್ಟು ಹೊರಟುಬಿಟ್ಟೆ. ಮನುವಿನ ಮನೆಗೇ ಹೋದೆ. ಅವನು ಹುಚ್ಚನಾಗಿ ಹೋಗಿದ್ದ. ಹುಚ್ಚಿನಲ್ಲಿ ಕಣ್ಣಿಗೇನೋ ಹಾಕಿಕೊಂಡದ್ದರಿಂದ ಎರಡು ಕಣ್ಣುಗಳೂ ದೃಷ್ಟಿಹೀನವಾಗಿದ್ದುವು. ನಮಗೆ ಕೊಟ್ಟು; ಉಳಿದಿದ್ದ ಹಣವೂ ಖರ್ಚಾಗಿಹೋಗಿತ್ತು. ಆದರೆ ನನ್ನ ಹತ್ತಿರ ಮನು ಉತ್ತಮಸ್ಥಿತಿಯಲ್ಲಿದ್ದಾಗ ಕೊಟ್ಟ ಕೆಲವು ನಗಗಳಿದ್ದುವು.

ಅವುಗಳನ್ನೆಲ್ಲಾ ಮಾರಿ ಮನುವಿಗೆ ಚಿಕಿತ್ಸೆಮಾಡಿಸಿದೆ. ಚಿಕಿತ್ಸೆಯಿಂದ ಅವನ ಹುಚ್ಚು ಸಂಪೂರ್ಣ ವಾಸಿಯಾಗದಿದ್ದರೂ ಕೆಲವು ವೇಳೆ ಅವನು ಸರಿಯಾಗಿರುತ್ತಿದ್ದ. ಆದರೆ ಅದರಿಂದ ಆಗಾಗ ಜ್ವರ ಬರುತ್ತಿತ್ತು. ಅಂತೂ ಮೊದಲಿನ ಮನುವನ್ನು ನನ್ನ ತಾಯಿ ಕೊಂದುಹಾಕಿಬಿಟ್ಟಿದ್ದಳು. ಮನುವಿನ ಆ ಸ್ಥಿತಿಯಲ್ಲಿ ನಾನವನೊಡನೆ ಹೆಚ್ಚುಕಾಲ ನಿಲ್ಲಲಾರೆನೆಂದು ನನ್ನ ತಾಯಿ ಯೋಚಿಸಿದ್ದಳು. ಆದರೆ ಅವಳು ಕರೆಯುವಾಗ ನಾನು ಅವಳೊಡನೆ ಹೋಗದಿದ್ದುದರಿಂದ ಅವಳಿಗೆ ತುಂಬಾ ಸಿಟ್ಟು ಬಂತು. ಅದರ ಮೇಲೆ ನಾನಲ್ಲಿರುವುದೇ ಕಷ್ಟವಾಯಿತು. ಕೊನೆಗೆ ನಾನೂ ಮನುವೂ ಊರು ಬಿಟ್ಟು ಇಲ್ಲಿಗೆ ಬಂದುಬಿಟ್ಟೆವು. ದಿನಗಳು ಕಳೆದಂತೆ ಮನುವಿನ ಬುದ್ಧಿ ಸಂಪೂರ್ಣವಾಗಿ ಲೋಪವಾಗಿಹೋಯ್ತು. ಏನೇನು ಮಾಡಿದರೂ ಅವನಿಗೆ ವಾಸಿಯಾಗಲಿಲ್ಲ. ಕೇವಲ 'ರಾಣಿ' ಎಂದು ನನ್ನನ್ನು ಕೂಗುವುದಲ್ಲದೆ ಹೆಚ್ಚಿನ ಮಾತುಗಳನ್ನೇ ಆಡುತ್ತಿರಲಿಲ್ಲ. ಆದರವನಿಗೆ ನಾನು ಹತ್ತಿರವಿರುವುದು ತಿಳಿಯುತ್ತಿತ್ತು. ನಾನೆಲ್ಲಾದರೂ ಸ್ವಲ್ಪ ಅತ್ತಿತ್ತ ಹೋದರೆ 'ರಾಣೀ' ಎನ್ನುತ್ತಿದ್ದ. ಮೂರು ವರ್ಷಗಳಿಂದ ನಾವಿಬ್ಬರೂ ಈ ಮನೆಯಲ್ಲಿದ್ದೆವು. ಈಗ ಅವನಿಲ್ಲ. ಮತ್ತೆ ನನಗಿಲ್ಲೇನು ಕೆಲಸ?

"ಡಾಕ್ಟರ್, ನಾನು ನಿಮಗಿದೆಲ್ಲಾ ಬರೆಯುತ್ತಿರುವೆನೇಕೆ? ಇಷ್ಟು ವರ್ಷಗಳಲ್ಲಿ ನಮ್ಮಿಬ್ಬರ ವಿಷಯದಲ್ಲಿ ಮನುಷ್ಯೋಚಿತವಾದ ಕರುಣೆಯಿಂದ ವರ್ತಿಸಿದವರು ನೀವು ಮತ್ತು ಸುಬ್ಬು ಇಬ್ಬರೆ. ಆದರಿಂದ ನಿಮಗೆ ಹೇಳಿ ಹೋಗುವ ಸಲುವಾಗಿ ಇದನ್ನು ಬರೆಯಬೇಕಾಯ್ತು. ನೀವು ಮನುವಿನ ಕೊನೆಗಾಲದಲ್ಲಿ ಮಾಡಿದ ಸಹಾಯ ಎಂದೂ ಮರೆಯುವಂತಿಲ್ಲ. ನನ್ನಂಥ ದರಿದ್ರ ಪ್ರಾಣಿ ನಿಮಗೆ ಯಾವ ಪ್ರತಿಫಲವನ್ನು ಕೊಡಬಲ್ಲುದು? ದೇವರೇ ನಿಮಗೆ ಒಳ್ಳೆಯದನ್ನು ಮಾಡಬೇಕು.

**ರಾಜಮ್ಮ**"

ಓದಿ ಪಾರ್ವತಿಯ ಕೈಗೆ ಕೊಟ್ಟೆ. ಅವಳೂ ಓದಿದಳು. ಕಣ್ಣುಗಳೆರಡರಲ್ಲೂ ನೀರು ತುಂಬಿತ್ತು. 'ನಾನೆಂಥಾ ಪಾಪಿ' ಎಂದುಕೊಂಡಳು.

ನನ್ನ ಮನಸ್ಸು ಏನೋ ಒಂದು ತರವಾಗಿತ್ತು. ಅದೂ ಪಾರ್ವತಿಯ ಮಾತನ್ನೇ ಹೇಳುವಂತೆ ‘ನಾನೆಂಥಾ ಪಾಪಿ!’ ಎಂದಿತು.

ಆದಿನ ಸಾಯಂಕಾಲ ತಿರುಗಾಡಲು ಹೊರಡುವಾಗ ಪಾರ್ವತಿಯೂ ತಾನೂ ಬರುತ್ತೇನೆಂದಳು. ಇಬ್ಬರೂ ರಾಜಮ್ಮನ ಮನೆಗೇ ಹೋದೆವು. ಆದರೆ ನಾವು ಹೋಗುವ ಮೊದಲೇ ಅವಳು ಹೊರಟು ಹೋಗಿದ್ದಳು—

ಎಲ್ಲಿಗೋ ಯಾರಿಗೆ ಗೊತ್ತು!

# ಸುಖವೊ ದುಃಖವೊ

?

ದೊಡ್ಡ ಮನೆ; ಶೃಂಗಾರ ಪೂರಿತ ಮನೆ; ಬೇಕಾದಷ್ಟು ಚಿನ್ನ; ಬೇಕಾದಷ್ಟು ಉಡಿಗೆ ತೊಡಿಗೆ; ಸಂಭ್ರಮಕ್ಕೆ ಮಿತಿಯೇ ಇಲ್ಲ! ಇದೀಗ ಕಮಲೆ ಸುಖದ ಮೊದಲ ಮೆಟ್ಟಿಲನ್ನು ಹತ್ತಿದಳು. ಅವಳನ್ನು ತಣಿಸುವುದರಲ್ಲಿಯೆ ಹೊರಟು ಹೋದ ಸಂಜೀವರಾಯರು ಅಲ್ಲಿಂದ ನೋಡಿ ಅಳುತ್ತಿರಬಹುದೇ — ನಗುತ್ತಿರಬಹುದೇ? ಆದರೂ ಕಮಲೆ ಸುಖಿ!

ಕತೆಗಾರ್ತಿ

## ಶ್ರೀಮತಿ ಲೀಲಾ

ಶ್ರೀಮತಿ ಲೀಲಾ ಅವರು ಶ್ರೀ. ಶಿವರಾಮ ಕಾರಂತರ ಧರ್ಮಪತ್ನಿ. ಗಂಡನ 'ನೃತ್ಯ ಕರ್ನಾಟಕ'ದಲ್ಲಿ 'ಇವರು ಕಾರಂತರ ಅರ್ಧಾಂಗಿ' ಎಂಬಂತೆಯೆ ನೃತ್ಯ ಕಲಾವಿಶೇಷವನ್ನು ತೋರಿದರು. ಅವರೀಗ ಸಾಹಿತ್ಯರಂಗದಲ್ಲಿ 'ಕಾರಂತರ ಸಹಚಾರಿಣಿ'ಯಾಗಿ ಅಡಿಯಿಟ್ಟಿದ್ದಾರೆ. ಇವರೀ ಮೊದಲ ಕತೆ ಕನ್ನಡ ಶಾರದೆಯ ಆಕಾಂಕ್ಷೆಗೆ ಆಶ್ವಾಸನ ಕೊಡುವಂತಿದೆಯೆಂದು ಹೇಳಬಹುದು. ಭಾಷೆಗೆ ಸಂಸ್ಕಾರವು ಅಷ್ಟೊಂದಿಲ್ಲವೆಂದು ಇದರಲ್ಲಿ ಎನಿಸೀತು. ಪ್ರಥಮ ಕೃತಿಯಲ್ಲಿ ಅದು ಹೆಚ್ಚುಮಟ್ಟಿನ ಸಂಸ್ಕಾರವನ್ನು ಹೊಂದಿದೆಯೆಂದೇ ಹೇಳಬೇಕು. ಕಥನ ರೀತಿಯಲ್ಲಿಯ ನಯಮಾರ್ದವಗಳು ಶ್ರೀಮತಿ ಲೀಲಾ ಅವರ ಆಚಾರ–ವಿಚಾರ–ಕಲ್ಪನೆಗಳ ಸಂಸ್ಕೃತತೆಯ ಕುರುಹುಗಳಂತಿವೆ. ಬರುಬರುತ್ತ ಅವು ಹೆಚ್ಚು ವಿಕಾಸಹೊಂದಿ ಅವರ ಶೈಲಿ ಜನರ ಮನವನ್ನು ಹಿಡಿಯುವಂತಹ ಹದಕ್ಕೆ ಬೇಗನೆ ಬರಲಿದೆ.

ಸಂಜೀವರಾಯರಿಗೆ ತಿಂಗಳಿಗೆ ಬರೇ ಮೂವತ್ತು ರೂಪಾಯಿ ಸಂಬಳ. ಬಡಜೀವನ. ಅವರ ಹೆಂಡತಿ ಕಮಲಾಬಾಯಿಗೆ ಚಿಕ್ಕಂದಿನಿಂದಲೂ ಚಿನ್ನಾಭರಣ, ಉಡಿಗೆ–ತೊಡಿಗೆ ಎಂದರೆ ಪ್ರಾಣ. ತವರುಮನೆಯವರು ಅಷ್ಟು ಶ್ರೀಮಂತರಲ್ಲದಿದ್ದರೂ ಇವಳಿಗೆ ಯಾವ ರೀತಿಯಿಂದಲೂ ಕಡಿಮೆಮಾಡಿದ್ದಿಲ್ಲ. ಪತ್ನಿಯ ಎಲ್ಲ ಬಯಕೆಗಳನ್ನು ಸಲ್ಲಿಸಲು ಸಂಜೀವರಾಯರ ಹತ್ತಿರ ಹಣ ಎಲ್ಲಿಂದ ಬರಬೇಕು? ಈಗ ಅವರು ಏನು ಕೊಟ್ಟರೂ ಕಡಿಮೆ ಎಂತಲೇ ಆಕೆಯು ಹೇಳುವಳು. ಅಂತೂ ಸಂಜೀವರಾಯರಿಗೆ ಸುಖವಿಲ್ಲ; ಕಮಲಾಬಾಯಿಯ ಸುಖವನ್ನು ಪ್ರತ್ಯೇಕ ಹೇಳಬೇಕೆ?

ಸುಖವೂ ದುಃಖವೊ?

ರಾಯರು ಆಫೀಸಿನಿಂದ ಬಂದಕೂಡಲೇ ಕಮಲಾಬಾಯಿಯು 'ಪಿರಿ ಪಿರಿ' ಎಂದು ಗಾನಕ್ಕೆ ಆರಂಭ ಮಾಡುವಳು. ಆ ಗ್ರಾಮೋಫೋನನ್ನು ಕೇಳಲು ಎಂಟು ಕಿವಿಗಳಿದ್ದ ಬ್ರಹ್ಮನಿಗೂ ಅಸಾಧ್ಯ. 'ತನಗೆ ಅದು ಇಲ್ಲ; ಇದು ಇಲ್ಲ. ಪಕ್ಕದ ಮನೆ ರಾಧಾಬಾಯಿಗೆ ಹೊಸಸೀರೆ ತಂದಿದ್ದಾರೆ; ಈಚೆಮನೆ ಕನಕಮ್ಮನಿಗೆ ಹೊಸ ರವಕೆ-ಖಣ ತಂದಿದ್ದಾರೆ' ಎಂಬುದೇ ಹಾಡಿನ ಸೊಲ್ಲು.

ಸಂಜೀವರಾಯರಿಗೆ ಕೇಳಿಕೇಳಿ ಬೇಸರಾಯಿತು. ಗಂಡನೆಂದೆನಿಸಿಕೊಂಡಮೇಲೆ ಹೆಂಡತಿಯ ಮೇಳಕ್ಕೆ ತಾಳಹಾಕಬೇಕಷ್ಟೇ? ಅದಕ್ಕಾಗಿ ಬಹಳ ಪೇಚಾಟಪಡುತ್ತಿದ್ದರು. ಹಣದ ತೊಂದರೆ ಬಹಳ. ಈ ವಿಷಯ ಕಮಲಾಬಾಯಿಗೆ ಬಹಳವಾಗಿ ಹೇಳಿದ್ದರು: "ನೋಡು; ಎಲ್ಲರೂ ಮಾಡುತ್ತಾರೆ ಎಂದು ನಾವು ಮಾಡಬಾರದು; ಅವರ ಕೈಯಲ್ಲಿ ಹಣ ಉಂಟು, ಮಾಡುತ್ತಾರೆ. ಅವರು ಹಣ ಬೇಕಾದ ಹಾಗೆ ಉಪಯೋಗಿಸಲಿ ನಮಗೇನು? ಅವರು ಕುಣಿಯುತ್ತಾರೆ ಎಂದು ನಾವು ಕುಣಿಯಬೇಕೆ? ಶ್ರೀಮಂತರೊಡನೆ ಬೆರೆಯಲೆಂದು ಮನಸ್ಸು ಮಾಡಬೇಡ. ಅವರ ಸಹವಾಸವನ್ನೇ ಬಿಟ್ಟುಬಿಡು. ಸುಶೀಲಾಬಾಯಿಯ ಗೆಳೆತನ ಮಾಡಿಕೋ, ಅಂದರೆ ನಿನಗೆ ಇಷ್ಟವಿಲ್ಲ. ಅವರಾದರೆ ನಮ್ಮ ಸಾಲಿನವರು. ಅವರ ಗಂಡನಿಗೂ ನನಗೂ ಪರಿಚಯ ಬಹಳ ಇದೆ." ಇಷ್ಟೆಲ್ಲ ಕೇಳಿದಳೆಂದರೆ ಕಮಲಾಬಾಯಿಗೆ ತಡೆಯಲಾರದಷ್ಟು ಸಿಟ್ಟು ಬಂದುಬಿಡುವುದು. "ಹೌದು ನಾನು ಯಾವಾಗ ಮಾತಾಡಿದರೂ ನಿಮ್ಮದು ಇದೇ ಉಪದೇಶ. ನನ್ನ ಆಶೆಯಲ್ಲಾ ಮನಸ್ಸಿನಲ್ಲಿಯೇ ಮಾಯಬೇಕೆಂಬುದೇ ನಿಮ್ಮ ಆಲೋಚನೆ. ಅಯ್ಯೋ! ಸಾರ್ಥಕವಾಯಿತು- ನಿಮ್ಮನ್ನು ಮದುವೆಯಾದುದಕ್ಕೆ. ನನ್ನ ಯಾವ ಕರ್ಮದ ಫಲಕ್ಕಾಗಿ ನೀವು ಗಂಟುಬಿದ್ದಿರೋ!" ಎಂದು ಏನೂ ದಾಕ್ಷಿಣ್ಯವಿಡದೆ ಹೇಳಿಬಿಡುವಳು. ಇದನ್ನು ಕೇಳಿದರೆಂದರೆ ರಾಯರು ತಮ್ಮ ಬಡತನಕ್ಕಾಗಿ ತಾವೇ ನಾಚಿಕೊಳ್ಳುವರು. ತನ್ನನ್ನು ಮದುವೆಮಾಡಿಕೊಂಡಿದ್ದರಿಂದಲ್ಲವೆ ಹೆಂಡತಿಗೆ ಈ ದುರ್ದೆಸೆ—ಎಂದು ಅವರಿಗೆ ಬಹಳ ಪಶ್ಚಾತ್ತಾಪ.

೧೮ ಒಂದು ದಿನ ರಾಯರು ತಮ್ಮ ತಾಯಿ ಮರಣಾವಸ್ಥೆಯಲ್ಲಿ

ಕೊಟ್ಟಿದ್ದ ಉಂಗುರವನ್ನು ಮಾರಿದರು. ಅದನ್ನು ಮಾರುವಾಗ ಎಷ್ಟು ಬೇಸರಪಟ್ಟರೋ! ಮಾರಾಟದಿಂದ ಹದಿನೆಂಟು ರೂಪಾಯಿ ಬಂದಿತ್ತು. ಅದನ್ನು ಹೆಂಡತಿಗೆ ತಂದುಕೊಟ್ಟರು. "ಬೇಕಾದಷ್ಟು ತಕೊ" ಎಂದು ಹೇಳಿದರು. ಕಮಲಾಬಾಯಿಗೆ ಇದರಿಂದ ಸಂತೋಷವಾಗ ಬಹುದೆಂದು ಊಹಿಸಿದ್ದರು. ಅವಳು ಹಣ ಲೆಕ್ಕಾಮಾಡುತ್ತ "ಬರೀ ಹದಿನೆಂಟು ರೂಪಾಯಿ ತಾನೇ? ಇನ್ನೊಂದು ಏಳು ರೂಪಾಯಿಗಳಾ ದರೂ ಇದ್ದಿದ್ದರೆ. . . ." ಎಂದಳು. ರಾಯರ ಬೇಸರವು ಇಮ್ಮಡಿಯಾ ಯಿತು. ಎದ್ದು ಪಕ್ಕದಮನೆಯ ಸುಶೀಲಾಬಾಯಿಯ ಪತಿಯ ಹತ್ತಿರ ಹೋಗಿ ಹತ್ತು ರೂಪಾಯಿಯ ನೋಟೊಂದನ್ನು ಸಾಲವಾಗಿ ತಂದು ಕೊಟ್ಟು, ಮೂರು ರೂಪಾಯಿ ಹಿಂದಕ್ಕೆ ಇಸಿದುಕೊಂಡರು. ಆ ಮೂರು ರೂಪಾಯಿಗಳನ್ನು ಮರುದಿನ ಬೆಳಗ್ಗೆಯೇ ಅವರಿಗೆ ಹಿಂತಿರುಗಿ ಕೊಡಬೇಕೆಂದು ಆಲೋಚಿಸಿದ್ದರು.

ಇಲ್ಲಿಯವರೆಗೆ ಸಾಲಮಾಡದ ರಾಯರ ಮನಸ್ಸಿಗೆ ಇದು ಬಹಳ ನೋವನ್ನು ಕೊಟ್ಟಿತು. ತಾಯಿ ಕೊಟ್ಟ ಉಂಗುರ ಮಾರಿದ್ದೂ ಸ್ಮರ ಣೆಗೆ ಬಂತು; ತಾಯಿಯು ತಮ್ಮ ಮದುವೆಯ ಸಮಯದಲ್ಲಿ ಹೇಳಿದ ಮಾತು ನೆನಪಿಗೆ ಬಂತು: "ಮಗೂ, ನೀನು ಕಮಲೂ ಒಟ್ಟಿಗೆ ಸುಖ ವಾಗಿ ಬಾಳು" ಅಂದಿದ್ದರು. ಏನು ಸುಖವೋ? ಏನು ಬಾಳೋ? ಅದರ ಅರ್ಥವೇ ರಾಯರಿಗೆ ತಿಳಿಯದಾಗಿದೆ. ರಾತ್ರಿಯಾಗಿತ್ತು, ಊಟ ಮಾಡಿ ದರು. ಸ್ವಲ್ಪ ಸಮಯ ಪುಸ್ತಕ ಓದಿಕೊಂಡಿದ್ದು ಹಾಗೇ ಮಲಗಿ ಬಿಟ್ಟರು.

ಬೆಳಗ್ಗೆ ಎದ್ದು ಸ್ನಾನವನ್ನು ತೀರಿಸಿ ಫಲಾಹಾರಮಾಡಿ, ಹೊರಕ್ಕೆ ಹೊರಟರು. ಅಷ್ಟುಹೊತ್ತಿಗೆ ಕಮಲಾಬಾಯಿ ಬಂದು "ಹೌದೇನ್ರಿ, ಸೀರೆ ಮಾತ್ರ ಕೊಂಡರೆ ಸಾಕೇನು? ಅದಕ್ಕೊಂದು ಕುಪ್ಪಸಬೇಡವೇ?" ಎಂದರು. ರಾಯರಿಗೆ ಮಾತಾಡಲು ನಾಲಗೆಯೇ ಬಾರದು. ಒಂದು ಮಾತನ್ನೂ ಆಡದೆ ತಮ್ಮಲ್ಲಿ ಇದ್ದ ಮೂರು ರೂಪಾಯಿ ಹೆಂಡತಿಗೆ ಕೊಟ್ಟು, ಚಕಾರವನ್ನೂ ಎತ್ತದೆ ಕೆಲಸಕ್ಕೆ ಹೊರಟುಹೋದರು.

ಸು ಖ ವ್ರೊ ಸುಃ ಖ ವೊ ?

೮೦ ಗವಲ್ಲಿ

ರಾಯರು ಇಷ್ಟು ಬೇಸರಪಟ್ಟರೂ ಕಮಲಾಬಾಯಿಗೆ ಒಂದಿಷ್ಟಾದರೂ ಬೇಸರವಾಗಬೇಕೆ? ನೆರೆಕರೆಗೆಲ್ಲಾ ಹೋಗಿ ಈ ವರ್ತಮಾನವನ್ನೆಲ್ಲಾ ತಿಳಿಸಿದಳು. ಇಡೀ ದಿನ ಸಂತೋಷದಲ್ಲೇ ಇದ್ದಳು. ರೂಪಾಯಿಗಳನ್ನು ಎಲ್ಲಿಂದ ತಂದಿರೆಂದು ಅವಳಾಗಿ ಪ್ರಸ್ತಾಪ ಎತ್ತಲಿಲ್ಲ. ರಾಯರು ಹೇಳಲೂ ಇಲ್ಲ.

ಇತ್ತ ರಾಯರಿಗೆ ದಾರಿಯುದ್ದಕ್ಕೂ ಇದೇ ಯೋಚನೆ. ಸಿಟ್ಟಿನ ಭರದಲ್ಲಿ ಸಾಲವೇನೋ ತಂದುಕೊಟ್ಟರು. ಈಗ ಅದನ್ನು ತೀರಿಸುವ ಬಗೆ ಯಾವುದು ಅಂತ ಯೋಚಿಸುತ್ತಾ ಇರುವಾಗ ಒಂದು ಆಲೋಚನೆ ಹೊಳೆಯಿತು. ರಾಯರು ಮಧ್ಯಾಹ್ನ ಹೊಟೇಲಿನಲ್ಲಿಯೇ ಊಟ ಮಾಡುತ್ತಿದ್ದರು. ಪ್ರತಿ ಊಟಕ್ಕೆ ನಾಲ್ಕು ಆಣೆ ಕೊಡುತ್ತಿದ್ದರು. ಊಟ ವಜಾಮಾಡಿ, ಕಾಫಿ ಕುಡಿದರೆ ಒಂದು ಆಣೆ ಸಾಕಲ್ಲವೆ? ದಿನಕ್ಕೆ ಮೂರು ಆಣೆಯಂತೆ ಉಳಿಸಿದರೆ ತಿಂಗಳಿಗೆ ಐದು ರೂಪಾಯಿ ಹೇಗೂ ಆಗುತ್ತದೆ. ಇನ್ನುಳಿದ ಐದು ರೂಪಾಯಿಯನ್ನು ಸಂಬಳದಿಂದ ಉಳಿಸಬಹುದೆಂದು ಭಾವಿಸಿ ಒಂದು ತಿಂಗಳಿನ ಅಂತ್ಯದಲ್ಲಿ ಋಣಮುಕ್ತನಾಗುವೆನೆಂದು ಹಿಗ್ಗಿದರು.

ಆ ತಿಂಗಳು ಕಳೆಯಿತು. ರಾಯರು ಸಾಲ ತೀರಿಸಿದರು. ಅವರ ಪ್ರಕೃತಿ ಮಾತ್ರ ಕೆಡುತ್ತಬಂತು. ಮಧ್ಯಾಹ್ನ ಅನ್ನಬಿಟ್ಟು ಕಾಫಿ ಕುಡಿಯುವುದು ದೇಹಕ್ಕೆ ಹೇಗೆ ಒಗ್ಗಬೇಕು? ಆದರೂ ಉಪಾಯವಿರಲಿಲ್ಲ. ಹೆಂಡತಿಗಾಗಿ ಅಷ್ಟನ್ನೂ ಮಾಡಿದರು,

ಮನೆಯಲ್ಲಿ ಈರೀತಿ ಅವಾಂತರವಾಗುವುದಕ್ಕೂ ಕಮಲಾಬಾಯಿಯ ತಂಗಿಗೆ ಮದುವೆ ನಿಶ್ಚಯವಾಗುವುದಕ್ಕೂ ಸರಿಯಾಯಿತು. ತಿರುಗಿ ಮೊದಲಾಯಿತು ಗ್ರಾಮೋಫೋನು. ಹಾಡುವ ಸಂಗೀತವೆಂದರೆ: “ನನಗೆ ಚಿನ್ನಾಭರಣ ತೊಡಲಿಕ್ಕೆ ಪುಣ್ಯವಿಲ್ಲ. ನನ್ನ ಅದೃಷ್ಟವೇ ಹಾಳು. ಬ್ರಹ್ಮ ಬರೆದದ್ದನ್ನು ಯಾರಿಂದಲಾದರೂ ತಿದ್ದಲಾದೀತೆ” ಎಂದು. ಈಗ ಮಾತ್ರ ರಾಯರಿಗೆ ನಿಜವಾದ ಸಿಟ್ಟುಬಂತು. “ಪುಣ್ಯಾತಗಿತ್ತಿ, ಚಿಂತಿಲ್ಲ; ನೀನು ಹುಟ್ಟಿದ್ದಕ್ಕೆ ಸಾರ್ಥಕವಾಯಿತು. ಎಷ್ಟು ಕೊಟ್ಟರೂ ನಿನ್ನ ಸಂಗೀತದ ಸ್ವಾದ ನನಗೆ ತಪ್ಪುವಹಾಗಿಲ್ಲ. ನೀನು ಆಡಿದ ಪ್ರತಿಯೊಂದು

ಮಾತನ್ನು ಕೇಳುತ್ತಾ ಇದ್ದರೆ ನಾನು ಭಿಕ್ಷಾಪಾತ್ರೆ ಹಿಡಿದುಕೊಂಡು ಹೋಗಬೇಕಾದೀತು. ಒಂದು ದಿನವಾದರೂ ನೀನು ಸಂತೋಷದಿಂದ ಮಾತಾಡಿದ್ದುಂಟೆ? ನಿನಗಾಗಿ ಆರೋಗ್ಯ ಕೂಡ ಲೆಕ್ಕಿಸದೆ ಇದ್ದೆ. ಆದರೂ ನಿನಗೆ ಒಂದಿಷ್ಟು ಕರುಣೆ ಎಂಬುದಿಲ್ಲ. ನಿನಗೆ ಕೊಡುವುದೆಲ್ಲ ಗೋರ್ಕಲ್ಲ ಮೇಲೆ ಮಳೆ ಸುರಿದಹಾಗೆ!" ಎಂದು ಅತ್ತರು. ಕಮಲಾಬಾಯಿ ಸುಮ್ಮನೇ ಕೇಳುತ್ತಾ ನಿಂತಿದ್ದಳು.

ಆ ದಿನ ರಾಯರು ಕಾಫಿ ಕುಡಿಯದೆಯೇ ಹೊರಟರು. ಆಫೀಸಿನಲ್ಲಿ ಬರೆಯಲು ಕುಳಿತರೆ ಕೈಯೆಲ್ಲ ನಡುಗಲಾರಂಭಿಸಿತು. ಮೈಯೆಲ್ಲ ಬೆವರ ಹತ್ತಿತು. ಆ ದಿನ ರಜೆ ಪಡಕೊಂಡು ರಾಯರು ಮನೆಗೆ ಬಂದರು. ಬಹಳ ದಿನದಿಂದ ಈ ರೀತಿ ಆಗತೊಡಗಿತ್ತು; ಆದರೆ ರಜೆ ಪಡಕೊಳ್ಳುವ ಪ್ರಸಂಗ ಬಂದಿರಲಿಲ್ಲ. ಮದ್ದು ತೆಗೆದುಕೊಳ್ಳೋಣ ಎಂದರೆ ಹಣದ ತಗಾದೆ. ಒಟ್ಟಿನಲ್ಲಿ ಆರೋಗ್ಯ ಮಾತ್ರ ಬಹಳ ಕೆಟ್ಟಿತ್ತು.

ಒಂದು ನೋಡುತ್ತಾರೆ. ಹೆಂಡತಿ ಮನೆಯಲ್ಲಿದ್ದಿಲ್ಲ. ಸ್ವಲ್ಪ ಹೊತ್ತು ಮಲಗಿದ್ದರು. ಆಯಾಸವು ಹೆಚ್ಚಾಗಹತ್ತಿತು. ಗಂಟಲು ಆರ ತೊಡಗಿತು. ಮೆಲ್ಲನೆ ಹೆಂಡತಿಯನ್ನು ಕೂಗಿದರು; ಹೆಂಡತಿ ಕಾಣೆ. ಪಕ್ಕದ ಮನೆಗಳಿಗೆ ಹೋಗಿ ಅವರವರ ಗಂಡಂದಿರು ಏನೇನು ತಂದಿದ್ದಾರೆ ಎಂದು ಕೇಳಲು ಹೋಗಿರುವ ಕಮಲಾಬಾಯಿಗೆ ಇವರ ಕೂಗು ಹೇಗೆ ಕೇಳಬೇಕು?

ವೇದನೆಯು ಹೆಚ್ಚುತ್ತ ಬಂದಹಾಗೆ ರಾಯರ ನರಳಾಟವು ಹೆಚ್ಚಾಯಿತು. ಅದನ್ನು ಕೇಳಿ ನೆರೆಮನೆ ಸುಶೀಲಾಬಾಯಿ ಬಂದಳು. ರಾಯರನ್ನು ನೋಡಿ ಬಹಳ ವ್ಯಸನಪಟ್ಟಳು. ಅವರ ಸ್ಥಿತಿಯನ್ನು ನೋಡಿ ಅವಳಿಗೆ ಬಹಳ ಭಯವಾಯಿತು. ಮುಖವೆಲ್ಲಾ ವಿವರ್ಣಗೊಂಡಿತ್ತು. ರಾಯರು ಸನ್ನೆಯಿಂದ ನೀರನ್ನು ಕೇಳಿದರು. ಸುಶೀಲಾಬಾಯಿ ನೀರನ್ನು ತಂದಳು. ರಾಯರು ಲೋಟ ತೆಗೆದುಕೊಳ್ಳಲು ಕೈಚಾಚಿದರು. ಅದು ಜಾರಿ ಬೀಳು ವಂತಾಯ್ತು. ಆದ್ದರಿಂದ ಸುಶೀಲಾಬಾಯಿ ತಾನೇ ಸ್ವಲ್ಪಸ್ವಲ್ಪ ನೀರು ಬಾಯಿಗೆ ಎರೆಯತೊಡಗಿದಳು. ಅವರಿಗೆ ಸ್ವಲ್ಪ ಚೇತನ ಬಂದ ಹಾಗಾಯಿತು. ರಾಯರು ಸುಶೀಲಾಬಾಯಿಯ ಕೈಹಿಡಿದು "ನಿನ್ನ ಉಪಕಾರ

ಸು
ಖ
ವೇ
ದುಃ
ಖ
ವೇ?

"ಮರೆಯಲಾರೆನಕ್ಕಾ" ಎಂದು ಗದ್ಗದ ಕಂಠದಲ್ಲಿ ನುಡಿದರು. ಇವರು ಕೈಹಿಡಿಯುವುದಕ್ಕೂ ಕಮಲಾಬಾಯಿ ಬರುವುದಕ್ಕೂ ಸರಿಹೋಯಿತು. ಇದನ್ನು ಕಂಡಮೇಲೆ ಕಮಲಾಬಾಯಿ ಭೂಮಿಯಲ್ಲಿ ನಿಲ್ಲಲಿಲ್ಲ. ಥಟ್ಟನೆ ಸುಶೀಲಾಬಾಯಿಯನ್ನು ಬಯ್ಯಲಿಕ್ಕೆ ಪ್ರಾರಂಭ. ಪಾಪದ ಹೆಂಗಸು ಹೊರಟುಹೋದಳು. ಎಷ್ಟು ನೊಂದುಕೊಂಡಳೋ ಏನೋ?

ಕಮಲಾಬಾಯಿ ರಾಯರನ್ನು ಕಣ್ಣೆತ್ತಿಯೂ ನೋಡಲಿಲ್ಲ. "ಓಹೋ! ಇದಕ್ಕೆ ತಾನೇ ಸುಶೀಲಾಬಾಯಿ ಒಳ್ಳೆಯವಳು ಎನ್ನುವುದು?. . . ." ಎಂದು ಮಾತು ಪ್ರಾರಂಭಿಸಿಬಿಟ್ಟಳು.

ತಂಗಿಯ ಮದುವೆಗೆ ನಾಲ್ಕು ದಿನ ಮುಂಚಿತವಾಗಿಯೇ ಹೋಗಬೇಕೆಂದು ಕಮಲಾಬಾಯಿಯ ಆಲೋಚನೆ. ಅದೇ ಮೇರೆಗೆ ಈ ಹೊತ್ತು ಬೆಳಗ್ಗೆ ರಾಯರ ಹತ್ತಿರ ಕೇಳದೆಯೇ ಹೊರಟುಹೋದಳು.

ಕಮಲಾಬಾಯಿ ಹೋದುದನ್ನು ಸುಶೀಲಾಬಾಯಿ ಕಂಡಳು. ರಾಯರ ಸ್ಥಿತಿ ಏನಾಯಿತೋ ಎಂದು ಗಾಬರಿಯಿಂದ ಬಂದಳು. ಅವರು ಕಣ್ಮುಚ್ಚಿಕೊಂಡು ಮಲಗಿದ್ದರು. ಅವಳು ಎಚ್ಚರಮಾಡದೇ ತಿರುಗಿ ಹೋದಳು. ಮಧ್ಯಾಹ್ನ ಕೆಲಸದಿಂದ ಬಂದ ಯಜಮಾನರೊಡನೆ ಈ ಸಂಗತಿಯನ್ನು ತಿಳಿಸಿದಳು. ಅದನ್ನು ಕೇಳಿದ ಕೂಡಲೇ ರಾಮಚಂದ್ರರಾಯರು ಬಂದರು. ಗೆಳೆಯನ ಅವಸ್ಥೆಯನ್ನು ಕಂಡು ಅವರು ಬಹುವಾಗಿ ಮರುಗಿದರು. ಡಾಕ್ಟರರನ್ನು ಕರೆಯಿಸಿದರು. ಡಾಕ್ಟರರು ಪರೀಕ್ಷಿಸಿ "ಕ್ಷಯದ ಛಾಯೆ, ಹೆಚ್ಚು ಸಮಯ ಬದುಕುವ ಹಾಗಿಲ್ಲ" ಅಂದರು. ಕಾಲವು ಮೀರಿತು; ಯಾವ ಉಪಾಯದಿಂದಲೂ ಇವರನ್ನು ಬದುಕಿಸುವ ಹಾಗೆ ಇರಲಿಲ್ಲ.

ಆ ದಿನವೆಲ್ಲಾ ಆ ದಂಪತಿಗಳಿಗೆ ರಾಯರ ಶುಶ್ರೂಷೆಯೇ ಮುಖ್ಯವಾಗಿತ್ತು. ಎಷ್ಟು ಮಾಡಿದರೂ ಪ್ರಯೋಜನವಿಲ್ಲದೆ ಹೋಯಿತು. ಈ ಸ್ಥಿತಿಯಲ್ಲೂ ರಾಯರು ಪತ್ನಿಯ ವಿಷಯವೇ ಹಂಬಲಿಸುತ್ತಿದ್ದರು. ತನ್ನ ಮರಣದ ನಂತರ ಪತ್ನಿಯ ಪಾಡೇನು? ಒಂದು ಬಿಡಿ ಕಾಸನ್ನೂ ಸಂಪಾದಿಸಲಿಲ್ಲವಲ್ಲಾ – ಎಂಬ ವಿಚಾರ ರಾಯರನ್ನು ಬಹಳ ನೋವು ಮಾಡಿತು.

ರಾತ್ರಿ ಏರುತ್ತ ಬಂದ ಹಾಗೆ ರಾಯರ ಬೇನೆ ತೀಕ್ಷ್ಣವಾಗುತ್ತ ಬಂತು. ಶ್ವಾಸಬಿಡುವುದೇ ಕಷ್ಟವಾಯಿತು. ಸುಶೀಲಾಬಾಯಿಯು ರಾಯರನ್ನು ಬದುಕಿಸಬೇಕೆಂದ, ದೇವರೊಡನೆ ಹರಕೆಯನ್ನು ಬೇಡಿ ಕೊಂಡಳು. ಆದರೂ ಪ್ರಯೋಜನವಿಲ್ಲ; ರಾತ್ರಿ ಹತ್ತುಗಂಟೆ ಸುಮಾ ರಿಗೆ ರಾಯರ ಪ್ರಾಣಜ್ಯೋತಿಯು ನೊಂದಿತು. ದೇವಲೋಕದ ಸುಮ ವದು, ಈ ಲೋಕದಲ್ಲಿ ನಿಲ್ಲುವುದೇ?

ಕೂಡಲೇ ಈ ವರ್ತಮಾನ ಕಮಲಾಬಾಯಿಗೆ ಮುಟ್ಟಿತು. ಅವಳು ಬಹುವಾಗಿ ಅತ್ತಳು. ರಾಯರಿಗಾಗಿ ಅಲ್ಲ, ಆದರೆ ತನ್ನ ಆಶೆಯು ಪೂರ್ತಿಯಾಗದ್ದಕ್ಕೆ.

ಕಮಲೆ ಇದ್ದುದನ್ನು ಮಾರಿ ಕೆಲವು ಸಮಯ ಹೇಗೂ ಜೀವನ ವನ್ನು ಸಾಗಿಸಿದಳು. ತವರು ಮನೆಯವರೂ ಅವಳನ್ನು ಮನ್ನಿಸಲಿಲ್ಲ. ಸುಶೀಲಾಬಾಯಿ ಮಾತ್ರ ತನ್ನ ಮನೆಯಲ್ಲಿ ಇರುವಂತೆ ಹೇಳಿದಳು. ಆಗ ಕಮಲಾಬಾಯಿ "ನನ್ನ ಯಾಕೆ ಕರೆಯುತ್ತೀ? ರಾಯರನ್ನು ಕರೆ, ಅಂದು ಕೈಹಿಡಿದು ನಿಂತಿದ್ದಿಯಲ್ಲೇ? ನೀನು ಕರೆದರೆ ಬಂದಾರು, ಆಮೇಲೆ ಮನೆಯಲ್ಲಿ ಕೂರಿಸಿಕೋ" ಎಂದು ಸಿಡುಕಿನಿಂದ ನುಡಿದಳು. ಸುಶೀಲಾಬಾಯಿ ಸುಮ್ಮನೆ ಇರಬೇಕಾಯಿತು.

ಇತ್ತ ಕಮಲೆಯ ಜೀವನ ಕಷ್ಟವಾಯಿತು. ಮನೆ ಬಾಡಿಗೆ ಬಾಕಿ, ಅಂಗಡಿಯಲ್ಲಿ ಸಾಲ, ಏನೂ ಮಾಡಲು ಬರುವಂತಿಲ್ಲ. ಒಂದು ರಾತ್ರಿ ಮನೆಬಿಟ್ಟು ಬೇರೆ ಊರಿಗೆ ಓಡಿದಳು. ಅಲ್ಲಿ ಭಿಕ್ಷಾಟನದಿಂದ ಜೀವನವನ್ನು ಸಾಗಿಸತೊಡಗಿದಳು.

ಒಂದು ದಿನ ಒಂದು ದೊಡ್ಡ ಮನೆಗೆ ಭಿಕ್ಷೆಗೆಂದು ಬಂದಳು. ಮನೆಯ ಯಜಮಾನಿಯೊಡನೆ ತನ್ನ ಗೋಳನ್ನು ಹುಯ್ಯುಕೊಂಡಳು. ಯಜಮಾನಿ ತನ್ನ ಪೂರ್ವವೃತ್ತಾಂತವನ್ನು ಹೇಳಿದಳು; ತಾನು ಸುಖಿ ಯಾಗಲು ಮಾಡಿದ ವೃತ್ತಿಯನ್ನೂ ತಿಳಿಸಿದಳು. ಕಮಲಾಬಾಯಿ "ಆ ವೃತ್ತಿಯನ್ನು ಮಾಡಿದರೆ ಬೇಕಾದಷ್ಟು ಚಿನ್ನ ಸಿಗುವುದೇ?" ಎಂದು ಕೇಳಲು ಮರೆಯಲಿಲ್ಲ. ಮನೆಯ ಯಜಮಾನಿ ತಾನು ಸಂಪಾ ದಿಸಿದ ಚಿನ್ನವನ್ನೆಲ್ಲಾ ತೋರಿಸಿದಳು. ಅದನ್ನು ಕಂಡು ಕಮಲೆಯ

ಸು
ಖ
ವೂ
ದು
ಖ
ವೂ ?

ಬಾಯಿಯಲ್ಲಿ ನೀರು ಸುರಿಯಿತು. ಅಂದಿನಿಂದ ಅದೇ ವೃತ್ತಿಯನ್ನು ಮೊದಲು ಮಾಡಿದಳು. ಕಮಲೆ ತನ್ನ ಜೀವನದಲ್ಲಿ 'ಸುಖ'ದ ಮೊದಲನೆಯ ಮೆಟ್ಟಿಲನ್ನು ಹತ್ತಿದಳು.

ಈಗಾಗಲೇ ಕಮಲೆ ಸುಖಿ. ದೊಡ್ಡಮನೆ, ಶೃಂಗಾರಪೂರಿತ ಮನೆ; ಹೆಸರು "**ಕಮಲಾ ವಿಲಾಸ.**" ವಿಲಾಸಕ್ಕೆ ಬರುವ ಜನರೂ ಕಡಿಮೆಯಿಲ್ಲ. ಬೇಕಾದಷ್ಟು ಚಿನ್ನ, ಬೇಕಾದಷ್ಟು ಉಡಿಗೆತೊಡಿಗೆ, ಸಂಭ್ರಮಕ್ಕೆ ಮಿತಿಯೇ ಇಲ್ಲ.

ಇದನ್ನು ಸಂಜೀವರಾಯರು ಸ್ವರ್ಗದಿಂದ ನೋಡಿ ಅಳುತ್ತಿರಬಹುದೇ—ನಗುತ್ತಿರಬಹುದೇ? ಆದರೂ ಕಮಲೆ ಸುಖಿ!

# ಕಳಕೊಂಡ ರತ್ನ

ಶುಶ್ರೂಷೆ ಮಾಡುತ್ತ ಮಾಡುತ್ತ ದಿನ ಗಳೆದಂತೆ ಡಾಕ್ಟರ್‍ರ್ತಿ ರೋಗಿಗೆ ಮನ ಸೋತುಬಿಟ್ಟಳು; ಅವಳ ಉಪಚಾರಗಳನ್ನು ಹೊಂದುತ್ತ ಹೊಂದುತ್ತ ರೋಗಿ ಅವಳಲ್ಲಿ ಅನುರಕ್ತನಾಗಿಬಿಟ್ಟನು. ಅವನಾರು, ಅವ ಳಾರು? ಇದೆಂತಹ ಪಾಪ! ಆದರೆ ಕಾಳಿ ದಾಸನು ಇಂತೇಕೆ ನುಡಿಯುತ್ತಾನೆ: "ಸತಾಂ ಹಿ ಸಂದೇಹಪದೇಷು ವಸ್ತುಷು ಪ್ರಮಾಣಮಂತಃಕರಣಪ್ರವೃತ್ತಯಃ"

ಕತೆಗಾರ್ತಿ

## ಶ್ರೀಮತಿ ಗೌರೀದೇವಿ ಇಂಚಲಮಠ

ಇವರೊಬ್ಬ ಗೋಕಾವಿಯ ಸುಶಿಕ್ಷಿತ ಮಹಿಳೆ. ಸುಧಾರಣಾ ಪ್ರಿಯರು. ಆರ್ಯಸಂಸ್ಕೃತಿಯ ಪರಂಪರಾಗತನೀತಿನಿರ್ಬಂಧಗಳನ್ನು ಕಳಚುವುದು ಇವರಿಗೆ ಸೇರದಾದರೂ ಸಮಾಜದ ಅನ್ಯಾಯ ಅನಾಚಾರಗಳನ್ನು ಕತೆಗಳಲ್ಲಿ ಟೀಕಿಸದಿರುವು ದಿಲ್ಲ. ಹೊಸ ಹಾದಿಯನ್ನು ಸೂಚಿಸುವ ಸಾಹಸವು ಬರೆಹಗಳಲ್ಲಿ ಕಂಡುಬರುವುದಿಲ್ಲ. ಈ ಪೋಷಲು ಇವರು ಕೆಲವು ಕತೆಗಳನ್ನು ಬರೆದಿದ್ದಾರೆ. 'ಕಥಾಕುಂಜ', 'ಸರಸ್ವತಿಗಳಲ್ಲಿ' ಒಂದೆರಡು ಅಚ್ಚಾಗಿವೆ. ಇವರ ಶೈಲಿಯಲ್ಲಿ ಹೃದಯವನ್ನು ಹಿಡಿದು ಅಲುಗಿಸುವಂತಹ ಶಕ್ತಿ ಇಲ್ಲದಿದ್ದರೂ ಸರಳ ಅಂತಃಕರಣವು ಕಂಡುಬರುತ್ತದೆ. ಬರೆವಣಿಗೆಯ ರೀತಿ ಹೊಸಬೆಡಗಿನಲ್ಲಿ ಹರಿಯದಿದ್ದರೂ ಒಂದು ತೆರದ ಗಂಭೀರತೆ ವಾಚಕರ ವಾಚನವನ್ನು ತೃಪ್ತಿಯಿಂದಲೇ ಮುಂದುವರಿಸುವಂತಿದೆ.

ಬೆಳಗಿನ ಏಳು ಗಂಟೆಯ ಸಮಯ. ಒಂದು ಚಿಕ್ಕ ಕೋಣೆಯಲ್ಲಿ ಮಂಚದ ಮೇಲೆ, ಇಪ್ಪತ್ತೇಳು ಇಪ್ಪತ್ತೆಂಟು ವರ್ಷದ ಯುವಕನು ಮಲಗಿದ್ದನು. ಅವನ ಬೆನ್ನಿಗೂ ಎದೆಗೂ ದಪ್ಪವಾದ ಅರಿವೆಯ ಪಟ್ಟಿಯನ್ನು ಕಟ್ಟಿದ್ದರು. ಅವನಿಗೆ ಆಗ ತಾನೇ ಮೈಮೇಲೆ ಪ್ರಜ್ಞೆ ಹುಟ್ಟಿ 'ನಾನೆಲ್ಲಿರುವೆನು ? ಇನ್ನೂ ಹಡಗಿನಲ್ಲಿರುವೆನೆ, ಅಥವಾ ಮನೆಯಲ್ಲಿರುವೆನೆ ?' ಎಂದು ಯೋಚಿಸುತ್ತಿದ್ದನು. ಅಷ್ಟರಲ್ಲಿ ಶುಭ್ರವಸ್ತ್ರವನ್ನುಟ್ಟ ಒಬ್ಬ ಯುವತಿಯು ಅಲ್ಲಿಗೆ ಬಂದಳು. ಆ ಯುವಕನು ಅವಳನ್ನು ಕುರಿತು "ನೀವು ಯಾರು ?" ಎಂದು ಪ್ರಶ್ನಿಸಿದನು.

"ನಾನು ಇಲ್ಲಿಯ ಡಾಕ್ಟರ‍್ತಿಯು; ನಿಮ್ಮ ಉಪಚಾರಕ್ಕೋಸ್ಕರ ನನ್ನನ್ನು ನೇಮಿಸಿರುವರು."

"ಹಾಗಾದರೆ ನಾನೆಲ್ಲಿರುವೆನು ?"

"ನೀವು ಮುಂಬೈ ಜೇಜೇ ಆಸ್ಪತ್ರೆಯಲ್ಲಿದ್ದೀರಿ."

"ನನಗೆ ಯಾವ ಕಾಯಿಲೆಯಾಗಿದೆ ? ಇಲ್ಲಿಗೆ ಬಂದು ಎಷ್ಟು ದಿವಸವಾಯಿತು ?"

"ನಿಮಗೆ ಡಬಲ್‌ನಿಮೋನಿಯ ಆಗಿದೆ. ನೀವು ಇಲ್ಲಿಗೆ ಬಂದು ನಾಲ್ಕು ದಿವಸವಾಯಿತು."

"ನಾನಿಲ್ಲಿರುವುದು ನಮ್ಮ ಮನೆಯವರಿಗೆ ತಿಳಿಸಿರುವಿರಾ ?"

"ಇಲ್ಲ; ನೀವು ಇಲ್ಲಿಗೆ ಬಂದಾಗ ನಿಮಗೆ ಮೈಮೇಲೆ ಪ್ರಜ್ಞೆ ಯೆ ಇರಲಿಲ್ಲ. ಕಾರಣ ನಿಮ್ಮ ವಿಷಯವನ್ನರಿಯಲು ನಮಗೆ ಸಾಧ್ಯವಾಗಲಿಲ್ಲ. ಇದೇ ಈಗ ನಿಮಗೆ ಎಚ್ಚರಿಕೆ ಹುಟ್ಟಿದೆ. ಇನ್ನು ಮೇಲೆ ತಿಳಿಸುವೆವು."

"ಈಗ ನನ್ನ ದೇಹಸ್ಥಿತಿ ಹೇಗಿದೆ ?"

ಗ
ಪ
ಲ್ಲಿ

"ಸ್ವಾಮೀ, ಹೆಚ್ಚು ಮಾತಾಡಿ ಆಯಾಸ ಮಾಡಿಕೊಳ್ಳಬೇಡಿ; ಮೊದಲಿಗಿಂತಲೂ ನಿಮ್ಮ ವ್ಯಾಧಿಯು ಎಷ್ಟೋ ಗುಣ ಹೊಂದಿದ್ದು ಈ ದಿವಸ ನಿಮಗೆ ಪ್ರಜ್ಞೆ ಸಹ ಉಂಟಾಗಿದೆ. ನೀವಿನ್ನು ಭಯಪಡುವ ಕಾರಣ ವಿಲ್ಲ."

ಆಕೆಯು ಆತನನ್ನು ಧೈರ್ಯಗೊಳಿಸಿ ಔಷಧೋಪಚಾರಗಳನ್ನು ಮಾಡುತ್ತಿರುವಷ್ಟರಲ್ಲಿ ದೊಡ್ಡ ಡಾಕ್ಟರ್ ಸಾಹೇಬನು ಅಲ್ಲಿಗೆ ಬಂದನು. ರೋಗಿಯನ್ನು ಕಂಡು ಅವನಿಗೆ ಅತ್ಯಾನಂದವಾಗಿ ಅವನೊಡನೆ ಕೆಲ ಹೊತ್ತು ಮಾತುಗಳನ್ನಾಡಿ, ಸರಿಯಾಗಿ ನೋಡಿಕೊಳ್ಳಲು ಡಾಕ್ಟರ್ತಿಗೆ ತಿಳಿಸಿ ಹೊರಟುಹೋದನು.

ಡಾಕ್ಟರ್ತಿಯು ಆ ಯುವಕನ ಮನೆಯವರಿಗೆ ತಿಳಿಸಿದಳು. ಅವನ ಆರೈಕೆಯನ್ನು ಅತ್ಯಂತ ಶ್ರದ್ಧೆಯಿಂದ ತತ್ಪರಳಾಗಿ ಮಾಡುತ್ತ ಅವನ ಬಳಿ ಯಲ್ಲಿಯೇ ಇರುತ್ತಿದ್ದಳು.

ರಾತ್ರಿ ಹನ್ನೆರಡು ಗಂಟೆಯ ಸಮಯ. ಡಾಕ್ಟರ್ತಿಯು ಎಷ್ಟೋ ಪ್ರಯತ್ನಪಟ್ಟರೂ ನಿದ್ರಾದೇವಿಯು ಒಲಿಯಲಿಲ್ಲ. ಆ ಹೊಸ ರೋಗಿಯ ಪ್ರತಿಬಿಂಬವು ಕಣ್ಮುಂದೆ ಕಟ್ಟಿದಂತಾಗುತ್ತಿತ್ತು. ಅವನ ದುಂಡಾದ ಮೈಕಟ್ಟು, ವಿಶಾಲವಾದ ಹಣೆ, ಕಾಮನಬಿಲ್ಲಿನಂತಿರುವ ಹುಬ್ಬುಗಳು, ದೊಡ್ಡದಾದ ನೇತ್ರಗಳು, ಸ್ಫಟಿಕದಂತಿರುವ ದಂತಪಙ್ಕ್ತಿಗಳು, ಅಗಲ ವಾದ ಎದೆ, ಶುಭ್ರವಾದ ದೇಹಕಾಂತಿ. ಅವನ ಸುಂದರಾಕೃತಿಯೆಲ್ಲವೂ ಅವಳಿಗೆ ಭ್ರಮೆಯನ್ನುಂಟುಮಾಡಿತು. ಆಗವಳು 'ಅಹಾ! ಎಂಥ ಸುಂದರ ಪುರುಷನೀತ! ಇಷ್ಟು ಅಶಕ್ತತೆಯಲ್ಲಿದ್ದರೂ ಈತನು ಎಷ್ಟು ತೇಜಸ್ವಿಯಾಗಿ, ಮನೋಹರವಾಗಿ ತೋರುವನು! ರೂಪಿಗೆ ತಕ್ಕಂತೆ, ಗುಣ–ವಿದ್ಯಾ–ಧನ ಎಲ್ಲವೂ ಸರಿಯಾಗಿ ಕೂಡಿದೆ. ಈತನ ಕೈಹಿಡಿದವರ ಪುಣ್ಯದ ಸಮಾನವಿಲ್ಲ. ನನಗಾದರೊ ಅರಗಳಿಗೆ ಸಹ ಈತನನ್ನಗ ಲಿರಲು ಮನಸ್ಸೊಪ್ಪಲೊಲ್ಲದು. ಈತನ ಸುಂದರವಾದ ಮುಖಕಮಲ ವನ್ನು ನೋಡುತ್ತ ಸದಾ ಈತನ ಸಾನ್ನಿಧ್ಯದಲ್ಲೇ ಇರಬೇಕೆನಿಸುತ್ತದೆ. ಈತನ ಸ್ಪರ್ಶವಾದರಂತೂ ನನ್ನ ಮೈಮೇಲಿನ ಪ್ರಜ್ಞೆಯೇ ತಪ್ಪಿದಂತಾಗಿ ನನ್ನ ಬಾಹುಪಾಶದಲ್ಲೀತನನ್ನು ಬಿಗಿದಪ್ಪಿಕೊಳ್ಳಬೇ ಎಂದೆನಿಸುತ್ತದೆ.

ಇಲ್ಲಿಯವರೆಗೆ ನಾನೆಷ್ಟೋ ರೋಗಿಗಳ ಶುಶ್ರೂಷೆಯನ್ನು ಮಾಡುತ್ತ ಬಂದಿದ್ದೇನೆ. ನನಗೆ ಎಂದೂ ಹೀಗಾಗಿರಲಿಲ್ಲ. ಈತನು ಇಲ್ಲಿಗೆ ಬಂದಾಗಿನಿಂದ ನನಗೆ ಊಟ-ಉಡಿಗೆ ಸಹ ಬೇಡಾಗಿ ನನ್ನ ಹೃದಯವು ಅತ್ಯಂತ ತಳಮಳಗೊಳ್ಳುತ್ತಲಿದೆ. ಈತನ ವಿಷಯದಲ್ಲಿ ನನಗೆ ಈ ರೀತಿ ಮನೋವ್ಯಥೆಯುಂಟಾಗಲು ಕಾರಣವೇನಿರಬಹುದು ? '

ಹೀಗೆ ಆಲೋಚಿಸುತ್ತಿರುವಷ್ಟರಲ್ಲಿ ಅವಳು ಒಮ್ಮಿಗಿಲೆ ಗಾಬರಿಯಾದಳು. ' ಇದೇನು, ನನ್ನ ಮೈಮೇಲೆ ಪ್ರಜ್ಞೆ ಇದೆಯೋ ಇಲ್ಲವೊ! ಪರಪುರುಷನಲ್ಲಿ ಈ ರೀತಿ ದುರ್ವಿಚಾರಗಳನ್ನು ನಡೆಸುತ್ತಿರುವೆನು. ಪರಪುರುಷರನ್ನು ಮನದಲ್ಲಿ ಸಹ ನೆನೆಯುವುದು ಮಹಾಪಾತಕವಲ್ಲವೆ? ಸೀತಾ, ಸಾವಿತ್ರಿ, ಸೀಲಾಂಬಿಕೆ, ಹೇಮರಡ್ಡಿಮಲ್ಲಮ್ಮ ಮೊದಲಾದ ಇನ್ನೂ ಎಷ್ಟೋ ಸಚ್ಚರಿತ್ರ ಶಿಖಾಮಣಿಗಳ ಚರಿತ್ರೆಗಳನ್ನು ಓದಿಯೂ ಮೂಢಳಂತೆ ದುರ್ಮಾರ್ಗದ ಕಡೆಗೆ ಮನಸನ್ನೆಳೆದೊಯ್ಯುತ್ತಿರುವೆನು-ಇದು ನನ್ನ ಮಹಾಪರಾಧವೇ ಸರಿ. ನಾನು ಯಾರು ? ಹುಟ್ಟಿದ್ದೆಲ್ಲಿ ? ನನ್ನನ್ನು ಕೊಟ್ಟದ್ದೆಲ್ಲಿ ? ನನ್ನ ಧರ್ಮವೇನು ? ಸಮಾಜದ ಮೇಲೂ ಮನೆತನದ ಮೇಲೂ ದೂರದೃಷ್ಟಿಯನ್ನಿಟ್ಟು ವಿಚಾರಮಾಡದೆ ಕುರುಡಳಂತೆ ವರ್ತಿಸಿ ಉಭಯಕುಲಕ್ಕೂ ಅಪಕೀರ್ತಿಯನ್ನು ತರುತ್ತಿದ್ದೆನಲ್ಲದೆ ನಾನೂ ಮಹಾಪಾಪಕ್ಕೆ ಪಾತ್ರಳಾಗುತ್ತಿದ್ದೆನು. ಇಡೀ ಸ್ತ್ರೀ ಸಮಾಜಕ್ಕೇ ಕಲಂಕವನ್ನು ತರುತ್ತಿದ್ದೆನು. ' ಹೀಗೆ ತನ್ನಷ್ಟಕ್ಕೆ ತಾನೇ ಬಹಳವಾಗಿ ಹಳಿದುಕೊಂಡು ಅತ್ಯಂತ ಪಶ್ಚಾತ್ತಾಪಪಟ್ಟಳು. ಅತಿಶಯ ಭೀತಿಯು ಉತ್ಪನ್ನವಾಗಿ ಅವಳ ಹೃದಯವು ನಡುಗಲಾರಂಭಿಸಿತು.

ಕೆಲವು ದಿವಸಗಳ ಮೇಲೆ ಆ ಯುವಕನ ಮನೆಯವರು ಅಲ್ಲಿಗೆ ಬಂದರು. ಕ್ರಮೇಣ ಅವನ ವ್ಯಾಧಿಯು ಗುಣಹೊಂದುತ್ತಾ ಸ್ವಲ್ಪ ಓಡಾಡುವಷ್ಟು ಶಕ್ತಿಯೂ ಅವನಿಗುಂಟಾಯಿತು. ಆದರೆ ಅವನಿಗೆ ಡಾಕ್ಟರ್ತಿಯ ವಿಷಯದಲ್ಲಿ ಆಗಾಗ್ಗೆ ಅನೇಕ ವಿಚಾರಗಳು ಬರುತ್ತಿದ್ದವು. ' ಡಾಕ್ಟರ್ತಿಯು ನನ್ನನ್ನು ಇಷ್ಟೇಕೆ ಪ್ರೀತಿಸುವಳು ? ನನ್ನ ಮೇಲೆ ಇಷ್ಟೊಂದು ಆದರ ತೋರಿಸುವ ಕಾರಣವಾದರೂ ಏನಿರಬಹುದು? ಇವಳ ಮುಖಲಕ್ಷಣಗಳು ಇವಳೊಬ್ಬ ದೊಡ್ಡ ಮನೆತನದ ಸ್ತ್ರೀಯೆಂದು ಹೇಳುವಂತಿವೆ. ಆದರೆ ಸದಾ ಖಿನ್ನಳಾಗಿಯೇ ತೋರುವಳು. ಈ ವಯಸ್ಸಿನಲ್ಲಿ

ಇವಳು ಹೀಗಿರಲು ಕಾರಣವೇನು ? ಇವಳಿಗಿನ್ನೂ ವಿವಾಹವಾಗಿದೆಯೋ ಇಲ್ಲವೊ ? ಇವಳನ್ನು ಕಂಡೊಡನೆಯೇ ನನಗೆ ಹೇಗೆ ಹೇಗೊ ಆಗುತ್ತಿರುತ್ತದೆ. ನಾನು ಪರದೇಶದಲ್ಲಿ ಎಂಥೆಂಥ ಸುಂದರಿಯರ ಬಲೆಯಿಂದ ಪಾರಾದೆನು. ಆದರೆ ಇವಳ ಕೈಯಿಂದ ಪಾರಾಗಲು ನನಗೆ ಶಕ್ಯವಿದ್ದಂತೆ ತೋರುವುದಿಲ್ಲವಲ್ಲ ! ಇವಳು ನನ್ನ ಜೀವವನ್ನೇ ಹರಣಮಾಡಿಕೊಂಡಿರುವಳು. ಇವಳ ಗಂಭೀರವಾದ ನುಡಿಯೂ ಮನೋಹರವಾದ ನಡೆಯೂ ಚಂದ್ರಬಿಂಬದಂತಿರುವ ಮುಖಮುದ್ರೆಯೂ ಇವೆಲ್ಲವು ನನ್ನನ್ನು ಮುಗ್ಧನನ್ನಾಗಿ ಮಾಡಿವೆ. ಅರಗಳಿಗೆ ಸಹ ಇವಳನ್ನಗಲಿರಲು ನನ್ನ ಮನಸೊಪ್ಪಲೊಲ್ಲದು. ಇವಳ ಸುಂದರವಾದ ರೂಪಾತಿಶಯವನ್ನು ನೋಡುತ್ತ ಸದಾ ಇವಳ ಬಳಿಯಲ್ಲಿಯೇ ಇರಬೇಕೆನಿಸುತ್ತದೆ. ಆದರೆ ನನಗೀರೀತಿ ಭ್ರಾಂತಿಯನ್ನು ಹುಟ್ಟಿಸಿ ತನ್ನ ಮೋಹಪಾಶದಲ್ಲಿ ಸಿಲುಕಿಸಿಕೊಂಡಿರುವ ಈ ನವಸುಂದರಾಂಗಿಯು ಯಾರಾಗಿರಬಹುದು ? ನಾನು ಬಂದು ಇಷ್ಟು ದಿವಸಗಳಾದರೂ ಇವಳ ವಿಷಯವನ್ನೇ ಅರಿತುಕೊಂಡಿಲ್ಲವೆಂದ ಮೇಲೆ ನಾನೆಂಥ ಮೂಢನು !'

* * * *

ಆಸ್ಪತ್ರೆಯ ಆವಾರದಲ್ಲಿ ಒಂದು ಮಾಟಾದ ಮನೆ. ಅದರ ಮುಂಭಾಗದಲ್ಲಿ ಚಿಕ್ಕದೊಂದು ಹೂದೋಟ. ಅದರಲ್ಲಿ ಚಿತ್ರವಿಚಿತ್ರ ಗಿಡಬಳ್ಳಿಗಳು ಶೋಭಿಸುತ್ತಲಿದ್ದವು. ಅದರೊಳಗಿನ ಪುಷ್ಪಗಳು ಅರಳಿ, ಸುತ್ತಲ್ಲಾ ಪರಿಮಳವು ಬೀರುತ್ತಿತ್ತು. ಸಾಯಂಕಾಲದ ತಂಗಾಳಿಯು ಬೀಸಿ ಮನಸ್ಸಿಗೆ ಉಲ್ಲಾಸವನ್ನು ಕೊಡುತ್ತಿತ್ತು. ಡಾಕ್ಟರಿಣಿಯು ಹೂದೋಟದಲ್ಲಿಯ ಒಂದು ಆಸನದ ಮೇಲೆ ಏನೇನೋ ಯೋಚಿಸುತ್ತ ಕುಳಿತಿದ್ದಳು. ಅವಳ ಶುಭ್ರವಾದ ದೇಹಕಾಂತಿಯೂ ಧರಿಸಿದ್ದ ವಸ್ತ್ರವೂ ಒಂದೇ ಆಗಿ ಅವಳು ಮಹಾಶ್ವೇತೆಯಂತೆ ಒಪ್ಪುತ್ತಿದ್ದಳು. ತಂಗಾಳಿಯ ಸಹಾಯದಿಂದ ಅವಳ ಕಪ್ಪಾದ ಉಂಗುರಗೂದಲು ಸುಂದರವಾದ ಅವಳ ಮುಖಪದ್ಮವನ್ನಾವರಿಸಿ ಶೋಭೆಯನ್ನು ಹೆಚ್ಚಿಸುತ್ತಿದ್ದುದರಿಂದ, ಆ ಯುವತಿಯು ಅತ್ಯಂತ ಮನೋಹರಳಾಗಿ ತೋರುತ್ತಿದ್ದಳು.

ಇದೀಗ ಗುಣ ಹೊಂದಿದ ಆ ರೋಗಿಯು ಬೇಸರವನ್ನು ಕಳೆದು ಕೊಳ್ಳಲು ಅದೇ ಮೊಗದೋಟಕ್ಕೆ ಬಂದನು. ಅವನು ಅಲ್ಲಿ ಆಸನದ

ಮೇಲೆ ಕುಳಿತಿರುವ ಡಾಕ್ಟರ್ರಿಯನ್ನು ಕಂಡು, 'ಈ ಮಹಾಸ್ತ್ರೀತೆಯ ಪರಿಚಯವನ್ನು ಮಾಡಿಕೊಳ್ಳಲು ಇದು ತಕ್ಕ ಸಮಯವಾಗಿದೆ' ಎಂದುಕೊಂಡು ಆ ಯುವತಿಯಿದ್ದೆಡೆಗೆ ಬಂದನು. ಅವಳು ಆದರದಿಂದ ಅವನನ್ನು ಬರಮಾಡಿಕೊಂಡು ಅವನಿಗೊಂದಾಸನವನ್ನು ಕೊಟ್ಟು ತಾನು ಅವನ ಸಮೀಪದಲ್ಲಿ ಕುಳಿತಳು.

"ಸ್ವಾಮೀ, ಇಲ್ಲಿಗೇಕೆ ಬಂದಿರಿ? ನನ್ನಿಂದಲೇನಾದರೂ ತಮಗೆ ಕೆಲಸವಾಗುವುದಿತ್ತೇ?" ಎಂದು ಡಾಕ್ಟರ್ರಿಯು ಕೇಳಿದಳು. "ಇಲ್ಲ ನನಗೆ ಬಹಳ ಬೇಸರಬಂದಿದ್ದರಿಂದ ಇಲ್ಲೇ ಸ್ವಲ್ಪ ತಿರುಗಾಡಬೇಕೆಂದು ಹೊರಟಿದ್ದೆನು. ನಿಮ್ಮನ್ನು ಕಂಡು ಹಾಗೆಯೇ ಇಲ್ಲಿಗೆ ಬಂದೆ, ಅಷ್ಟೆ. ಮತ್ತೇನೂ ಇಲ್ಲ."

"ಸ್ವಾಮೀ, ತಾವು ಇಷ್ಟು ಬೇಗ ಗುಣವಾಗಿ ಇಷ್ಟರಮಟ್ಟಿಗಾಗಿದ್ದು ಕಂಡು ನನಗೆ ಅತ್ಯಾನಂದವಾಗುತ್ತದೆ. ಪರಮೇಶ್ವರನ ಅನುಗ್ರಹದಿಂದ, ಹಡೆದವರ, ಕೈಹಿಡಿದವರ ಪುಣ್ಯಪ್ರಭಾವದಿಂದ ನೀವು ಈ ಕುತ್ತಿನಿಂದ ಪಾರಾದಿರಿ. ಇಷ್ಟರಲ್ಲೇ ನಿಮಗೆ ಸಾಹೇಬರು ಹೊರಡಲಪ್ಪಣೆಯನ್ನು ಕೊಡುವರು."

"ಇದೆಲ್ಲವೂ ದೇವರ ಕೃಪೆ ಮತ್ತು ನಿಮ್ಮ ಅಂತಃಕರಣವೇ ಹೊರತು ಬೇರೆ ಇಲ್ಲ. ಆದರೆ, ನಿಮ್ಮ ವಿಷಯವನ್ನು ಅರಿತುಕೊಳ್ಳಬೇಕೆಂದು ನನಗೆ ತುಂಬಾ ಕುತೂಹಲವುಂಟಾಗಿದೆ. ನಾನು ನಿಮ್ಮ ಸಮೀಪದ ಆಪ್ತನೆಂದು ತಿಳಿದು ನಿಮ್ಮ ವಿಷಯವನ್ನು ಸವಿಸ್ತಾರವಾಗಿ ತಿಳಿಸಿ."

ಅದಕ್ಕೆ ಡಾಕ್ಟರ್ರಿಯು ನಿಟ್ಟುಸಿರುಬಿಟ್ಟು "ಸ್ವಾಮೀ, ನನ್ನಂಥ ನಿರ್ಭಾಗ್ಯಳ ಚರಿತ್ರೆಯನ್ನು ಏನು ಕೇಳುವಿರಿ? ನಾನೊಬ್ಬ ದಿಕ್ಕಿಲ್ಲದ ಅನಾಥೆಯು. ನೀವಿಷ್ಟು ಒತ್ತಾಯಪಡಿಸುತ್ತಿರುವುದರಿಂದ ನನ್ನ ವಿಷಯವನ್ನು ವಿಶದಪಡಿಸುವೆನು" ಎಂದು ಹೇಳತೊಡಗಿದಳು:

"ಕರ್ನಾಟಕದ ದಕ್ಷಿಣಭಾಗದಲ್ಲಿ ಷಿಕಾರಿಪುರವೆಂಬುದು ನಮ್ಮೂರು. ಅಲ್ಲಿ ನಾನು ಒಂದು ದೊಡ್ಡ ಮನೆತನದಲ್ಲಿ ಜನಿಸಿದೆನು. ಮುರಲೀಧರನೆಂಬ ಸಭ್ಯಗೃಹಸ್ಥನು ನಮ್ಮ ತಂದೆಯು, ತಾರಾಮತಿಯೆಂಬ ಪತಿವ್ರತಾಶಿರೋಮಣಿಯು ನಮ್ಮ ತಾಯಿಯು. ನಮ್ಮ

೯೭ ಗ ಪ ಶ್ರೀ

ತಾಯಿತಂದೆಗಳಿಗೆ ನಾನೊಬ್ಬಳೇ ಮಗಳು; ಆದುದರಿಂದ ಅವರು ನನ್ನನ್ನು ಅತ್ಯಂತ ಪ್ರೇಮದಿಂದ ಸಲಹುತ್ತಿದ್ದರು. ನಮ್ಮ ತಂದೆ ವ್ಯಾಪಾರ-ಉದ್ಯೋಗದಿಂದ ಕುಟುಂಬ ಸಂರಕ್ಷಣೆ ಮಾಡುತ್ತಿದ್ದನು. ಆತನಿಗೆ ಇಂದುಧರನೆಂಬ ಒಬ್ಬ ಆಪ್ತಮಿತ್ರನಿದ್ದನು. ಇವರಿಬ್ಬರು ಅನ್ಯೋನ್ಯರಾಗಿ ಒಂದೇ ಮನೆತನದವರಂತೆ ವರ್ತಿಸುತ್ತ ಕೂಡಿಯೇ ವ್ಯಾಪಾರ ಮಾಡುತ್ತಿದ್ದರು. ನಮ್ಮ ತಂದೆತಾಯಿಗಳು ಮಿತ್ರತ್ವದ ಪ್ರೀತಿಯಿಂದ ಇಂದುಧರನ ಹಿರಿಮಗ ಶಶಿಧರನಿಗೆ ಚಿಕ್ಕಂದಿನಲ್ಲಿ ನನ್ನನ್ನು ಕೊಟ್ಟು ಮದುವೆ ಮಾಡಿದರು. ಆಗ ನನಗೆ ಐದು ವರ್ಷ, ನನ್ನ ಪತಿಗೆ ಎಂಟು ವರ್ಷ; ಮದುವೆ ಮುಂಜಿ ಅಂದರೇನೋ ನಮಗೇನೂ ತಿಳಿಯುತ್ತಿರಲಿಲ್ಲ. ಚಿಕ್ಕಮಕ್ಕಳು ಗೊಂಬೆಯಾಟವಾಡಿದಂತೆ ನಮ್ಮ ತಾಯಿತಂದೆಗಳು, ನಮ್ಮ ಮದುವೆಯ ಆಟವನ್ನಾಡಿ ಆನಂದಪಟ್ಟರು. ಆದರೆ ಈ ಆನಂದವು ಅವರಿಗೆ ಸ್ಥಿರವಾಗಲಿಲ್ಲ. ಕೆಲವು ದಿವಸಗಳಲ್ಲೇ ದುರ್ದೈವದಿಂದ ನಮ್ಮ ಮಾವನಿಗೆ ವ್ಯಾಪಾರದಲ್ಲಿ ಹಾನಿಯುಂಟಾಗಿ ಸಕಲಸಂಪತ್ತು ಹಾಳಾಗಿ ಅವನು ಪುರಂದರದಾಸನಾದನು. ಆಗ ನಮ್ಮ ತಂದೆ ಗೆಳೆಯನನ್ನು ಕುಟುಂಬಸಮೇತವಾಗಿ ತನ್ನ ಮನೆಯಲ್ಲಿ ಇರಿಸಿಕೊಂಡು ವರ್ಷಕಾಲ ಕೈಹಿಡಿದನು. ನಮ್ಮ ಮಾವನಿಗೆ ನಮ್ಮಲ್ಲಿರಲು ಇಷ್ಟವಿಲ್ಲದೆ ಪರಪ್ರಾಂತಕ್ಕೆ ಹೊರಡಲುದ್ಯುಕ್ತನಾದನು. ನಮ್ಮ ತಂದೆಯು ಎಷ್ಟೋ ವಿಧವಾಗಿ ಹೇಳಿಕೊಂಡರೂ ಕೇಳದೆ ತನ್ನ ಹಟವನ್ನೇ ಬಿಡಲಿಲ್ಲ. ಉಪಾಯವಿಲ್ಲದೆ ನಮ್ಮ ತಂದೆಯು ನಮ್ಮ ಮಾವನಿಗೆ ಎರಡು ಸಾವಿರ ರೂಪಾಯಿಗಳನ್ನು ಕೊಟ್ಟು ಕಳಿಸಿದನು. ನಂತರ ನಮ್ಮ ಮಾವನು ಕುಟುಂಬ ಸಮೇತ ಮದ್ರಾಸಿಗೆ ಹೋಗಿ ನೆಲೆಸಿದನು. ಅಲ್ಲಿಗೆ ಹೋದ ಮೇಲೆ ಆತನಿಂದ ಒಂದೆರಡು ಪತ್ರಗಳು ಬಂದಿದ್ದವು. ಆದರೆ ನಮ್ಮ ತಂದೆ ಆಪ್ತಸ್ನೇಹಿತನ ಅಗಲಿಕೆಯಿಂದ ಮನೋರೋಗ ಪೀಡಿತನಾಗಿ ಕೊನೆಗೆ ಅದರಲ್ಲೇ ಮೃತಪಟ್ಟನು. ಆಗ ನಾನು ಎಂಟು ವರ್ಷದವಳು. ನನಗೆ ಸುಖದುಃಖ ಯಾವುದೂ ಗೊತ್ತಿರಲಿಲ್ಲ. ಮುಂದೆ ನಮ್ಮ ತಾಯಿಯು ಮದ್ರಾಸಿನಲ್ಲಿ ನಮ್ಮ ಮಾವನ ಹತ್ತಿರ ಇರಬೇಕೆಂಬ ಆಕಾಂಕ್ಷೆಯಿಂದ ಆತನ ಆಶ್ರಯವನ್ನು ಕೇಳಿಕೊಂಡಳು. ಅವನು ನಮ್ಮನ್ನು ಹಚ್ಚಿಕೊಳ್ಳ

೩.೨ ಲಿಲ್ಲ. ನನ್ನ ತಾಯಿ ಕೊನೆಗೆ ನನ್ನೊಡನೆ ತನ್ನ ಅಣ್ಣನ ಆಶ್ರಯವನ್ನು

# ರಹಸ್ಯಭೇದ

ಹೊಸ ಪ್ರಣಯಿಗಳ ಮನಸಹೇಡಿತನ; ಹಳೆ ಸಮಾಜದ ರೂಢಿಯ ರಣರಕ್ಕಸತನ– ಇವೆರಡರ ನಡುವೆ ಎರಡು ಜೀವಗಳು ಬೆಂದವು. ಒಂದು ಪ್ರೇಮವನ್ನು ಬಾಳುಗೆಡಿಸಿದರೆ, ಒಂದು ಪ್ರೇಮವಿಲ್ಲದ ಹಾಳುಬಾಳಿಗೆ ನೂಕಿತು. ಪ್ರಣಯಭಂಗದ ಅಗ್ನಿಕುಂಡದಲ್ಲಿ ಉರಿದ ಎರಡು ಜೀವಿಗಳು– ಸುಮತಿ ಕೃಷ್ಣ ಜೋಯಿಸರು – ಹೇಗೆ ಶಾಂತಿಪಡೆದರು ?

ಕತೆಗಾರ್ತಿ

# ಶ್ರೀಮತಿ ಪಿ. ಭಾರತಿಬಾಯಿ

ಉಡುಪಿಯ ಶ್ರೀಮತಿ ಪಿ. ಭಾರತಿಬಾಯಿ ಪಣಿವಾಡಿಯವರು ಕೆಲವು ಕಾಲ ಗುಪ್ತ ವಾಗಿಯೇ ಬರೆಯುತ್ತಲಿದ್ದರು. ಅವರ ಹಿಂದಿನ ಕತೆಗಳನ್ನೆಲ್ಲ ಓದುತ್ತಬಂದರೆ, ಸಲಸಲಕ್ಕೆ ಅವರ ಸಾಹಿತ್ಯವು ಮೇಲೆ ಮೇಲೆ ಏರುತ್ತಿದೆ ಎಂದು ಕಾಣದಿರದು. ಹಳತನ್ನೆಲ್ಲ ತಳ್ಳದೆ ಹೊಸ ತನ್ನೆಲ್ಲ ಕೊಳ್ಳದೆ ಇವರ ವಿಚಾರಸರಣಿ ನಡುವೆ ಹರಿಯುತ್ತಿದೆ. ಅನ್ಯಾಯವನ್ನು ಖಂಡಿಸ ತಕ್ಕುದು, ಆದರ್ಶವನ್ನು ಮಂಡಿಸತಕ್ಕುದು ಇವರ ಬರೆವಣಿಗೆ. ಈ ಸಣ್ಣಕತೆಯಲ್ಲಿ ಅವರು ಒಂದು ದೀರ್ಘ ಜೀವನಚರಿತ್ರೆಯನ್ನು ತುಂಬಲು ಯತ್ನಿಸಿದ್ದರೂ ಕೊನೆಯಲ್ಲಿ ಆದರ್ಶ ಜೀವನದ ಸನ್ನಿವೇಶನನ್ನು ಚಿತ್ರಿಸಿ ತಮ್ಮ ಉದ್ದೇಶವನ್ನು ಓದುಗರ ಹೃದಯದಲ್ಲಿ ತಟ್ಟನೆ ಒತ್ತಿಬಿಟ್ಟಿದ್ದಾರೆ. ಇವರು ಸಾಹಿತ್ಯದ ರೀತಿಮಾರ್ಗಗಳನ್ನರಿತಿರುವುದರಿಂದ ಕಥಾಕಲೆಯ ಮೆಟ್ಟಿಲುಗಳನ್ನು ಬೇಗ ಬೇಗನೆ ಹತ್ತಬಲ್ಲರು.

"ಮಾಡಿದ ಅಪರಾಧವನ್ನು ಕ್ಷಮಿಸಿರಿ, ಸುಮತಿಯನ್ನು ಮದುವೆ ಮಾಡಿಕೊಳ್ಳಲು ಒಪ್ಪುತ್ತೇನೆ."

"ಎಲೋ ಬಡವ! ನಮ್ಮ ಹಳ್ಳಿಯ ಬಡ ಜೋಯಿಸರ ಹುಡುಗನೆಂದು ನಿನ್ನನ್ನು ತಂದು ಸಾಕಿ ಸಲಹಿದ್ದಕ್ಕೆ ನೀನಿಂತಹ ಅತ್ಯಾಚಾರವನ್ನು ಮಾಡಬಹುದೇ? ನೀಚ, ಇನ್ನು ನನ್ನ ಕಣ್ಣ ಮುಂದೆ ಒಂದರೆ ಕ್ಷಣವೂ ನಿಲ್ಲಬೇಡ, ತೊಲಗು."

" ಆದ ಅಪರಾಧವನ್ನು ಕ್ಷಮಿಸಿರಿ; ನನ್ನಿಂದಾಗಿ ಸುಮತಿಯ ಜೀವನವನ್ನೇ ಹಾಳು ಮಾಡಬೇಡಿರಿ. ಯಾರಿಗಾದರೂ ಈ ವರ್ತಮಾನವು ತಿಳಿದಲ್ಲಿ ಅವರೆಂದಿಗೂ ಸುಮತಿಯನ್ನು ಮದುವೆ ಮಾಡಿಕೊಳ್ಳಲಾರರು. "

" ನಿನಗೇತಕ್ಕೆ ಈ ಅಧಿಕಪ್ರಸಂಗ? ನಮ್ಮ ಭವಿಷ್ಯವನ್ನು ನಾವೇ ನೋಡಿಕೊಳ್ಳುವೆವು. ನೀನು ಮಾತ್ರ ಇನ್ನು ನನ್ನ ಕಣ್ಣಿಗೆ ಬಿದ್ದರೆ ನಿನ್ನ ಅಂತ್ಯಕಾಲ ಸಮೀಪಿಸಿತೆಂದು ತಿಳಿದುಕೊ. "

" ಮಹಾಸ್ವಾಮಿ! ಆಜ್ಞೆಯನ್ನು ಶಿರಸಾವಹಿಸುವೆನು. ಇನ್ನು ತಮ್ಮ ಮುಂದೆ ನಾನು ಎಂದಿಗೂ ಸಿಗುವಂತಿಲ್ಲ. ಈಗಲೇ ಹೊರಟೆ. "

ಬೆಂಗಳೂರಿನ ಶ್ರೀಮಂತ ಗೃಹಸ್ಥರಾದ ರಾಮರಾಯರಿಗೆ ಅವರ ಹಳ್ಳಿಯ ಜೋಯಿಸರ ಮಗನಾದ ಕೃಷ್ಣಜೋಯಿಸನು ಶಿರಬಾಗಿ ಹೊರಟುಹೋದನು.

* * * *

ರಾಮರಾಯರು ಪ್ರಸಿದ್ಧ ಜಮೀನುದಾರರು. ಅಷ್ಟಲ್ಲದೆ ಈಗಿನ ಕಾಲದ ವಿದ್ಯಾವಂತ ಸುಧಾರಿತ ಸಮಾಜದವರು. ಅವರಿಗೆ ಸುಮತಿ ಎಂಬ ಏಕಮಾತ್ರಪುತ್ರಿ ಇದ್ದಳು. ಸುಮತಿಯು ಐದು ವರ್ಷ ಪ್ರಾಯದಲ್ಲಿಯೇ ತಾಯಿಯನ್ನು ಕಳೆಕೊಂಡಿದ್ದಳು. ಮುಸಲ್ಮಾನ್ ಗಾಯಕಿಗೆ ಮನಸೋತ ರಾಮರಾಯರು ತನ್ನ ಹೆಂಡತಿಯ ಮರಣದ ನಂತರ ಎರಡನೆಯ ವಿವಾಹಮಾಡಿಕೊಳ್ಳುವ ಹವ್ಯಾಸಕ್ಕೆ ಹೋಗಲಿಲ್ಲ.

ಸುಮತಿಯು ಹೈಸ್ಕೂಲಲ್ಲಿ ಕಲಿಯುತ್ತಿದ್ದಳು. ಅವಳು ಅತ್ಯಂತ ವಿಲಾಸಿನಿಯೂ ಸ್ಫುರದ್ರೂಪಿಣಿಯೂ ಆಗಿದ್ದಳು. ಅವಳನ್ನು ಕಂಡವರು ಯಾರೂ ನೇತ್ರಾನಂದವನ್ನು ಪಡೆಯದೆ ಹೋಗುತ್ತಿರಲಿಲ್ಲ. ಸುಮತಿಯಂತಹ ಸುಶಿಕ್ಷಿತಳಿಗೆ ಯೋಗ್ಯವರನು ಸುಲಭವಾಗಿಯೇ ಸಿಕ್ಕುವನೆಂಬ ವಿಶ್ವಾಸವಿದ್ದುದರಿಂದಲೇ ರಾಮರಾಯರು ಸುಮತಿಯ ಮೆಟ್ರಿಕ್ ಮುಗಿಯುವವರೆಗೆ ಅವಳ ಮದುವೆಯ ಗೋಜಿಗೆ ಹೋಗಿರಲಿಲ್ಲ.

ಕೃಷ್ಣಜೋಯಿಸನು ರಾಮರಾಯರ ಹಳ್ಳಿಯ ಬಡ ಜೋಯಿಸನ ೪೭.
ಮಗನು. ಸಂಸ್ಕೃತ ಶಾಲೆಯಲ್ಲಿ ಜ್ಯೋತಿಷ್ಯವನ್ನು ಅಭ್ಯಾಸಿಸುತ್ತಿದ್ದನು. ಬಡವನಾದುದರಿಂದ ರಾಮರಾಯರಲ್ಲಿಯೇ ಉದರಪೋಷಣೆಯನ್ನು ಮಾಡಿಕೊಂಡು ಕಾಲಕಳೆಯುತ್ತಿದ್ದನು. ಅನುಕೂಲವೊದಗಿದಾಗಲೆಲ್ಲಾ ಮನೆಯ ಚಿಲ್ಲರೆ ಕೆಲಸವನ್ನು ಮಾಡುತ್ತಿದ್ದನು. ಬಡವನಾದಾಗ್ಯೂ ಆತನು ಒಳ್ಳೆಯ ತೇಜಸ್ವಿಯೂ ರೂಪವಂತನೂ ರಸಿಕನೂ ಆಗಿದ್ದನು. ಸುಮಾರು ಏಳೆಂಟು ವರ್ಷಗಳಿಂದ ರಾಮರಾಯರಲ್ಲಿಯೇ ವಾಸಮಾಡಿಕೊಂಡಿದ್ದುದರಿಂದ ರಾಮರಾಯರಿಗೆ ಅವನ ಮೇಲೆ ತುಂಬಾ ಅಭಿಮಾನವಿತ್ತು. ಎಷ್ಟೋ ಸಲ ಮನೆಯ ಜವಾಬುದಾರಿಯನ್ನು ಅವನ ಮೇಲೆಯೇ ಬಿಟ್ಟು ತಮ್ಮ ಪ್ರೇಯಸಿಯೊಡನೆ ಮದರಾಸು, ಬೊಂಬಾಯಿ, ಕಲಕತ್ತಾ ಮುಂತಾದ ಕಡೆಗೆ ಹೋಗುವ ಪದ್ಧತಿ ಇತ್ತು. ಆಗ ಇಡೀ ಮನೆಯಲ್ಲಿ ಅಧಿಕಾರಿಗಳೆಂದರೆ ಸುಮತಿ, ಮತ್ತು ಕೃಷ್ಣಜೋಯಿಸ. ಇವರು ಅನೇಕ ವರ್ಷಗಳಿಂದ ಒಂದೇ ಮನೆಯಲ್ಲಿದ್ದುದರಿಂದ ಇಬ್ಬರಿಗೂ ಪರಸ್ಪರ ಆದರಾಭಿಮಾನಗಳು ಇದ್ದುವು. ಅವರಿಬ್ಬರೂ ಜೊತೆಯಾಗಿ ಎಲ್ಲಿ ಹೋದರೂ ಏನು ಮಾಡಿದರೂ ಯಾರಿಗೂ ಏನೂ ಸಂದೇಹವಾಗುತ್ತಿರಲಿಲ್ಲ. ನೋಡುವವರಿಗೂ ಅಣ್ಣ ತಂಗಿಯರಂತೆಯೇ ಕಾಣುತ್ತಿದ್ದರು. ಅಂದಿನ 'ಆದಿನ'ದ ವರೆಗೆ ಅವರಲ್ಲಿಯೂ ಅನ್ಯಥಾಭಾವನೆ ಇರಲಿಲ್ಲ.

ಅಂದಿನ 'ಆ ದಿನ' ಅಂದರೆ ಹೋಳಿಹುಣ್ಣಿಮೆಯ ದಿನ. ಇಬ್ಬರೂ ಸಾಯಂಕಾಲ ಸಿನೆಮಕ್ಕೆ ಹೋಗಿದ್ದರು. ಅಂದಿನ ಸಿನೆಮವು "ಪ್ಯಾರಿಸಿನ ಮಧ್ಯರಾತ್ರಿ ( Midnight at Paris )." ಈ ಚಿತ್ರವು ಸರ್ವಾಂಗಶೃಂಗಾರಮಯವಾಗಿತ್ತು. ಇದನ್ನು ನೋಡಿದ ಇವರಿಬ್ಬರಿಗೂ ಮನಸ್ಸಿನಲ್ಲಿ ಏನೋ ಒಂದು ತರದ ಆಕಾಂಕ್ಷೆಯು ಅಲ್ಲಿಯೇ ಮೂಡಿತ್ತು. ಸಿನೆಮದಿಂದ ಹಿಂದಿರುಗಿ ಮನೆಗೆ ಬಂದು ಊಟಉಪಚಾರಗಳನ್ನು ಮುಗಿಸಿ ತಮ್ಮ ತಮ್ಮ ಶಯನಗೃಹಕ್ಕೆ ಹೋದರು. ಸುಮಾರು ಹನ್ನೊಂದು ಗಂಟೆಯಾದರೂ ನಿದ್ದೆಬಾರದಿದ್ದುದರಿಂದ ಕೃಷ್ಣಜೋಯಿಸನು ಮಹಡಿಯ ಮೇಲೆ ಹೋಗಿ ಬೆಳುದಿಂಗಳ ಸವಿಯನ್ನು ಸವಿಯುತ್ತಾ ಅತ್ತಿತ್ತ ತಿರುಗಾಡುತ್ತಿದ್ದನು.

ರಹಸ್ಯಭೇದ

ಸುಮತಿಯು ಹಾಸಿಗೆಯಲ್ಲಿ ಎಷ್ಟು ಹೊರಳಾಡಿದರೂ ನಿದ್ದೆ ಬಾರದೆ ಕಡೆಗೆ ಶಕುಂತಳೋಪಾಖ್ಯಾನವನ್ನಾದರೂ ತಂದು ಓದುವೆನೆಂದು ನೆಟ್ಟಗೆ ಮಾಳಿಗೆಗೆ ನಡೆದಳು. ಅಲ್ಲಿ ಒಮ್ಮಿಂದೊಮ್ಮೆಗೇ ಕೃಷ್ಣ ಜೋಯಿಸನನ್ನು ಕಂಡು ಬೆಚ್ಚಿದಳು. ಅವನು ಬಂದ ಕಾರಣವನ್ನು ಕೇಳಿದಳು. ಇಬ್ಬರೇ ಸುಮಾರು ಹೊತ್ತು ಮಾತನಾಡುತ್ತಾ ಕುಳಿತರು. ಅವರ ಮಾತಿನಲ್ಲಿ ಅಂದಿನ ಸಿನೆಮಾದ ವಿಷಯ ಮತ್ತು ರಾಮರಾಯರು ಪ್ರೇಯಸಿಯೊಡನೆ ಕಲಕತ್ತೆಗೆ ಹೋದ ವಿಷಯ ಮುಂತಾದ ವಿಚಾರಗಳೇ ಹೆಚ್ಚಾಗಿದ್ದುವು. ಅಂದಿನಿಂದ ಅವರ ಪವಿತ್ರ ಸಹೋದರ ಸ್ನೇಹವು ಗುಪ್ತ ಪ್ರಣಯ ರೂಪವನ್ನು ತಾಳಿತು.

ಆರು ತಿಂಗಳಲ್ಲಿ ಸುಮತಿಗೆ ಗರ್ಭಚಿಹ್ನೆ ತೋರಿತು. ಕೃಷ್ಣ ಜೋಯಿಸನಿಗೆ ಮಾತ್ರ ಆಕಾಶವೇ ಕಳಚಿಬಿದ್ದಂತಾಯಿತು. ಏನಾದರೂ ಮಾಡಿ ರಾಮರಾಯರ ಅನುಮತಿಯನ್ನು ಪಡೆದು ಸುಮತಿಯನ್ನು ತಾನೇ ಮದುವೆ ಮಾಡಿಕೊಳ್ಳಬೇಕೆಂದಿದ್ದನು. ಸುಮತಿಯೂ ಅದಕ್ಕೆ ಒಪ್ಪಿದ್ದಳು. ಆದರೆ ರಾಮರಾಯನಂತಹ ಶ್ರೀಮಂತನು ಹುಟ್ಟು ದರಿದ್ರನಿಗೆ ತನ್ನ ಮಗಳನ್ನು ಕೊಡುವನೇ?

೨

ಹದಿನೆಂಟು ಇಪ್ಪತ್ತು ವರುಷಗಳು ಸಂದುಹೋಗಿವೆ. ಸುಮತಿಗೆ ಎಷ್ಟೂ ಸುಖವಿಲ್ಲ. ತಂದೆ ಅಂದೇ ತೀರಿಹೋಗಿದ್ದಾನೆ. ಗಂಡ ಕೃಷ್ಣರಾಯನೂ ತನ್ನ ಲಕ್ಷಾಂತರ ಆಸ್ತಿಯನ್ನು ಇವಳಿಗಿಟ್ಟು ಈ ಲೋಕದ ಯಾತ್ರೆ ಮುಗಿಸಿದ್ದಾನೆ. ತಂದೆಯ ಆ ದೊಡ್ಡ ಆಸ್ತಿಗೂ ಗಂಡನ ಈ ಭಾಗ್ಯಕ್ಕೂ ತಾನೇ ಒಡತಿ. ಮದರಾಸಿನಲ್ಲಿ ತನ್ನ ಮಾಳಿಗೆಯಮನೆಯಲ್ಲಿ ಇದ್ದಾಳೆ. ಈ ಸಂಪತ್ತೆಲ್ಲ ಅವಳಿಗೆ ನೆಮ್ಮದಿ ಕೊಡಲಿಲ್ಲ. ಗಂಡನಿಂದ ಅಂಟಿದ ಒಂದು ರೋಗವೂ ತಾನು ಗಳಿಸಿದ ಪಾಪವೂ ಅವಳನ್ನು ಒಳಗೊಳಗೆ ಕೊರೆಯುತ್ತಿದ್ದುವು. ತನ್ನವರೆಂದರೆ ಐದು ವರುಷಗಳಿಂದ ಮನೆಯಲ್ಲಿ ಚಾಕರಿ ಮಾಡುತ್ತಿದ್ದ ಧರ್ಮದೇವನೆಂಬ ಆರ್ಯಸಮಾಜದ ಹುಡುಗನೊಬ್ಬನೆ. ಮಕ್ಕಳಿಲ್ಲದ ಸುಮತಿಗೆ ಧರ್ಮದೇವನಲ್ಲಿ ತುಂಬಾ ಮಮತೆ.

ಇತ್ತೀಚೆಗಂತೂ ಅವಳ ಸ್ಥಿತಿಯೇ ಬೇರೆಯಾಗಿದೆ. ಒಂದುದಿನ ಉದಾಸೀನ ಭಾವದಿಂದ ತನ್ನ ಕೋಣೆಯಲ್ಲಿ ಈಝೀಚೇರಿನಮೇಲೆ ಬಿದ್ದುಕೊಂಡು ಕಣ್ಣಿನಲ್ಲಿ ಧಾರಾಕಾರವಾಗಿ ನೀರು ಸುರಿಸುತ್ತಿದ್ದಳು. ಆ ಸಮಯದಲ್ಲಿ ಧರ್ಮದೇವನು ಬಂದು, ಯಾರೋ ಒಬ್ಬ ಜಟಾಧಾರಿ ಯೋಗಿ ಬಂದಿದ್ದಾರೆಂದೂ ತಮ್ಮನ್ನು ನೋಡಲಪೇಕ್ಷಿಸುವರೆಂತಲೂ ತಿಳಿಸಿದನು. ಸುಮತಿಯು ಬೇಗನೆ ಕಣ್ಣೊರಸಿಕೊಂಡು ಇಲ್ಲಿಗೆ ಕರೆದು ಕೊಂಡು ಬಾ ಎಂದು ಹೇಳಿದಳು.

ಯೋಗಿಯು ಬಂದು ಸುಮತಿಯ ಅಪೇಕ್ಷೆಯಮೇರೆಗೆ ಅವಳಿದುರಿಗಿದ್ದ ಒಂದು ಕುರ್ಚಿಯಲ್ಲಿ ಕೂತನು.

"ತಮ್ಮ ಹೆಸರು ಸುಮತಿ ಎಂದಲ್ಲವೆ?"

"ಹೌದು."

"ತಾವು ಬೆಂಗಳೂರಿನ ರಾಮರಾಯರ ಮಗಳಲ್ಲವೇ?"

"ಹೌದು. ನನ್ನ ಪರಿಚಯವು ತಮಗೆ ಹೇಗೆ?"

"ಹೇಗೋ ಪರಿಚಯವಾಯಿತು."

"ನನ್ನಿಂದ ತಮಗೆ ಆಗಬೇಕಾದ ಕಾರ್ಯವೇನು?"

"ಸರ್ವಬಿಟ್ಟ ಸನ್ಯಾಸಿಗೆ ಯಾರಿಂದ ಏನೂ ಆಗಬೇಕಾಗಿಲ್ಲ. ತಮ್ಮ ಮನಸ್ಸು ಈಗ ನೆಮ್ಮದಿಯಾಗಿಲ್ಲ. ಅದಕ್ಕೋಸ್ಕರ ತಮ್ಮ ಮನಸ್ಸಿಗೆ ಶಾಂತಿಯನ್ನು ಬಿತ್ತಿ ಹೋಗೋಣವೆಂದು ಬಂದೆ."

"ಬಹಳ ಸಂತೋಷ. ಅನೇಕ ವರುಷಗಳಿಂದ ಮನಃಶಾಂತಿ ಇಲ್ಲದ ನನಗೆ ಮನಃಶಾಂತಿಯನ್ನು ಕೊಟ್ಟರೆ ತಮ್ಮಿಂದ ತುಂಬಾ ಉಪಕಾರ ವಾಗುವುದು. ಅದಿರಲಿ, ತಮಗೆ ಸಾಮುದ್ರಿಕ ಶಾಸ್ತ್ರದ ಪರಿಚಯವಿರು ವುದೆಂದು ತೋರುತ್ತೆ."

"ಸ್ವಲ್ಪಮಟ್ಟಿಗೆ ತಿಳಿದಿರುವೆನು. ಆದರೆ ಜನರ ಮನಸ್ಸಿಗೆ ರುಚಿಸು ವಂತೆ ಠಕ್ಕು ಹೇಳಿ, ಕೊಟ್ಟಕಾಸನ್ನು ಹಿಡಿದುಕೊಂಡು ಹೋಗುವ ಯೋಗಿ ನಾನಲ್ಲ. ಇದ್ದದ್ದನ್ನು ಸ್ಪಷ್ಟವಾಗಿ ಹೇಳುವ ಮೂರ್ಖ ನಾನು."

"ನನಗೂ ಅಂಥವರೇ ಬೇಕಾಗಿರುವರು. ತಾವು ಹೇಳುವುದನ್ನು

ಹೇಳಬಹುದು" ಎಂದು ಹೇಳಿ ಅವರಿಬ್ಬರ ನಡುವಿನಲ್ಲಿದ್ದ ಮೇಜಿನ ಮೇಲೆ ತನ್ನ ಎಡಗೈಯನ್ನು ಚಾಚಿದಳು ಸುಮತಿ.

ಯೋಗಿಯು ಐದಾರು ನಿಮಿಷಗಳ ತನಕ ಹಸ್ತವನ್ನು ನೋಡಿ ಬಹಳ ಆಲೋಚನೆ ಮಾಡಿದವನಂತೆ ನಟಿಸಿ ಹೇಳತೊಡಗಿದನು. "ಬೇಕಾದ ವಿಷಯದಲ್ಲಿ ಪ್ರಶ್ನೆಗಳನ್ನು ಕೇಳಿರಿ. ಒಂದೊಂದಕ್ಕೇನೇ ಉತ್ತರ ಕೊಡುವೆನು."

"ನನ್ನ ಆಯುಷ್ಯವೆಷ್ಟು?"

"ಇನ್ನೂ ಐವತ್ತು ವರುಷವಿದೆ."

"ಅಯ್ಯಯ್ಯೋ! ಇನ್ನೂ ಅಷ್ಟು ಬದುಕಬೇಕೇ?"

"ಬದುಕದೆ ನಿರ್ವಾಹವಿಲ್ಲ."

"ಸಂತತಿ ಎಷ್ಟು?"

"ಒಂದೇ"

"ಸಿಕ್ಕಿಬಿದ್ದಿರಿ ನನಗೆ ಮಕ್ಕಳೇ ಇಲ್ಲವಲ್ಲ."

"ಶಾಸ್ತ್ರವೆಂದಿಗೂ ಸುಳ್ಳಾಗಲಾರದು."

"ನನ್ನ ಗಂಡ ಎಲ್ಲಿದ್ದಾರೆ?"

"ತಮಗೆ ಇಬ್ಬರು ಗಂಡಂದಿರು. ಒಬ್ಬನು ಸತ್ತಿದ್ದಾನೆ. ಒಬ್ಬನು ಬದುಕಿದ್ದಾನೆ."

"ಇದು ತೀರ ಸುಳ್ಳು."

"ಸುಳ್ಳನ್ನು ಸತ್ಯವನ್ನಾಗಿ ಮಾರ್ಪಡಿಸುವುದಕ್ಕೆಯೇ ನಾನಿಲ್ಲಿಗೆ ಬಂದವನು."

"ಅಂದರೆ?"

ಯೋಗಿಯ ಬಾಯಿಂದ ಮಾತೇ ಹೊರಡಲಿಲ್ಲ. ಸುಮತಿಯನ್ನೇ ದೃಷ್ಟಿಸಿ ನೋಡುತ್ತಿದ್ದನು. ಸುಮತಿಗೆ ಇದು ಒಂದೂ ಅರ್ಥವಾಗಲಿಲ್ಲ. ಯೋಗಿಯ ಕಣ್ಣಿನಲ್ಲಿ ನೀರು ಸುರಿಯಿತು. ಇಬ್ಬರೂ ಸ್ವಲ್ಪ ಸಮಯ ಮೌನವನ್ನು ಧರಿಸಿ ಪರಸ್ಪರ ನೋಡುತ್ತಿದ್ದರು.

ಸುಮತಿಗೆ ಏನೋ ಫಕ್ಕನೆ ಜ್ಞಾಪಕವಾಗಿ ಮುಖಚರ್ಯೆ ಬದಲಾಯಿಸಿತು. "ಕಿಟ್ಟೂ" ಎಂದು ಚೀರಿದಳು.

ಒಡನೆಯೇ ಯೋಗಿಯು "ಸುಮಾ" ಎಂದು ಗದ್ಗದಸ್ವರದಿಂದ ಅನ್ನುತ್ತಾ ಕೂತಲ್ಲಿಂದ ಎದ್ದು ಅವಳನ್ನು ಆಲಿಂಗಿಸಿಕೊಂಡನು. ಐದು ನಿಮಿಷ ಇಬ್ಬರೂ ಸ್ತಬ್ಧರಾಗಿದ್ದರು.

೩

ಸುಮತಿಯ ಆಗ್ರಹದಮೇರೆಗೆ ಕೃಷ್ಣಜೋಯಿಸನು ತನ್ನ ಕಥೆಯನ್ನು ಹೇಳತೊಡಗಿದನು.

"ಸುಮಾ, ಅಂದು ನಿಮ್ಮ ತಂದೆಯಿಂದ ಹೊರತಳ್ಳಲ್ಪಟ್ಟವನು ಅಲೆದಾಡಿಕೊಂಡು ಒಂದು ವರ್ಷದಮೇಲೆ ಕಾಶಿಗೆ ಹೋಗಿ ಸೇರಿದೆನು. ನನ್ನ ಹೃದಯದಲ್ಲಿ ಯಾವಾಗಲೂ ನಿನ್ನ ಮೂರ್ತಿಯು ನಲಿದಾಡುತ್ತಿದ್ದುದರಿಂದ ನಿನ್ನ ಅವಸ್ಥೆಯನ್ನು ಅರಿತುಕೊಳ್ಳಬೇಕೆಂದು ಹವಣಿಸುತ್ತಿದ್ದೆನು. ಒಂದೆರಡು ಕಾಗದವನ್ನು ನನ್ನ ಸ್ನೇಹಿತರಿಗೆ ಬರೆದೆ. ಅವರಿಂದ ಸರಿಯಾದ ಉತ್ತರವು ನನಗೆ ದೊರಕಲಿಲ್ಲ. ನಿನಗೆ ಮದುವೆ ಆಯಿತೆಂಬ ವರ್ತಮಾನವು ಮಾತ್ರ ತಿಳಿದದ್ದರಿಂದ ಬಂದ ಗಂಡಾಂತರದಿಂದ ಪಾರಾದೆ ಎಂದು ಬಹಳ ಸಂತೋಷವಾಯ್ತು. ಆದರೆ ಹೇಗೆ ಪಾರಾದೆ ಎಂಬುದು ತಿಳಿಯಲಿಲ್ಲ"

"ಹೀಗೆ ನಿನ್ನ ಧ್ಯಾನದಲ್ಲಿಯೇ ಕೆಲವು ಸಮಯ ಕಳೆದುಹೋಯಿತು. ಒಂದು ದಿನ ಬೆಳಿಗ್ಗೆ ನಾನು ಗಂಗಾಸ್ನಾನಕ್ಕೆಂದು ಹೋದಾಗ ಗಂಗಾತೀರದಲ್ಲಿ ಒಬ್ಬ ಸಾಧುವು ಪೂರ್ವಾಭಿಮುಖವಾಗಿ ಕೂತುಕೊಂಡು ತನ್ನ ನಿತ್ಯಾಹ್ನಿಕವನ್ನು ನೆರವೇರಿಸುತ್ತಿದ್ದನು. ನಾನು ಆತನ ಬಳಿಯಲ್ಲಿಯೇ ನಿಂತು ಎಲ್ಲವನ್ನೂ ನೋಡುತ್ತಿದ್ದೆನು. ಅವನು ತನ್ನ ಆಹ್ನಿಕವನ್ನು ಮುಗಿಸಿ ಕಣ್ಣು ತೆರೆಯುವಾಗ ನಾನು ನಿಂತಿರುವುದನ್ನು ನೋಡಿ 'ಕುವರ, ಬಾ ಕುಳಿತುಕೊ' ಎಂದು ಪ್ರೀತಿಯಿಂದ ಹೇಳಿದನು. ನಾನು ತಲೆಯಿಂದಲೇ ಸಮ್ಮತಿಸಿ ಋಷಿವರ್ಯನಿಗೆ ಸಾಷ್ಟಾಂಗವೆರಗಿ ಕುಳಿತುಕೊಂಡೆನು.

"ಮಗು ನಿನ್ನ ದೇಶ ಯಾವುದು? ನಿನ್ನ ಹೆಸರೇನು? ನೀನಿಲ್ಲಿಗೆ

ಬಂದ ಕಾರಣವೇನು ಎಲ್ಲವನ್ನೂ ಸವಿಸ್ತಾರವಾಗಿ ತಿಳುಹಿಸು '' ಎಂದು ಕೇಳಿದನು. ನಾನು ಆದಕ್ಕೋದ ಸಂಗತಿಗಳನ್ನೆಲ್ಲಾ ಸವಿಸ್ತಾರವಾಗಿ ತಿಳಿಸಿದಮೇಲೆ ಗುರುವರ್ಯನು ಇಷ್ಟವಿದ್ದರೆ ತನ್ನೊಂದಿಗೇನೇ ಇರುವಂತೆ ಹೇಳಿದನು. ನಾನು ಅದಕ್ಕೆ ಸಂತೋಷದಿಂದ ಸಮ್ಮತಿಸಿದೆನು.

'' ಅವನಿಂದ ಖಗೋಳ, ಭೂಗೋಳ, ವಿಷಯದಲ್ಲಿ ಜ್ಯೋತಿಷ್ಯದ ಅನೇಕ ಭಾಗಗಳಲ್ಲಿ ವಿಶೇಷ ಅನುಭವವನ್ನು ಪಡೆದೆನು.

''ಸುಮಾ ! ನಿನ್ನ ಜಾತಕವು ನನಗೆ ಗೊತ್ತಿದ್ದುದರಿಂದ ಒಂದು ದಿವಸ ಜಾತಕವನ್ನು ಹಿಡಿದುಕೊಂಡು ಏನೇನೋ ಗಣಿತವನ್ನು ಹಾಕುತ್ತಿದ್ದೆನು. ಆ ಸಮಯದಲ್ಲಿ ಅಕಸ್ಮಾತ್ತಾಗಿ ಗುರುದೇವನು ಬಂದು ಏನೆಂದು ಕೇಳಿದ್ದಕ್ಕಾಗಿ ಇದ್ದುದನ್ನು ಹೇಳುವುದಕ್ಕೆ ನಾಚಿಕೆಯಾಗಿ ಕಳ್ಳನಂತೆ ಅವನ ಮುಂದೆ ನಿಂತುಕೊಂಡೆನು. ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತವೆಂದರೆ ಆಪ್ತರಲ್ಲಿ ಸತ್ಯವನ್ನು ನುಡಿಯುವುದೆ, ಎಂಬ ಗುರುದೇವನ ಅಭಯವಚನದಿಂದ ಇದ್ದ ಸಂಗತಿ ಎಲ್ಲವನ್ನೂ ವಿವರಿಸಿ ಹೇಳಿದೆನು. ಅದನ್ನು ಕೇಳಿದ ಗುರುದೇವನು ಸಂತುಷ್ಟನಾಗಿ ನನ್ನ ಜ್ಞಾನವು ಪರಿಶುದ್ಧವಾಗುವಂತೆ ಆಶೀರ್ವದಿಸಿದನು. ಮತ್ತು ನಿನ್ನ ವಿಷಯದಲ್ಲಿ ನಾನು ಮಾಡಬೇಕಾದ ಕರ್ತವ್ಯವನ್ನೂ ಸೂಚಿಸಿದನು. ಈ ಕಥೆ ನಡೆದು ಸುಮಾರು ಹತ್ತುವರ್ಷವಾಗಿರಬಹುದು. ಆ ಮೇಲೆ ನನಗೆ ಗುರುದೇವನ ದರ್ಶನ ಇಂದಿನತನಕವೂ ಒದಗಲಿಲ್ಲ.

'' ಗುರುದೇವನ ಅಪ್ಪಣೆಯ ಪ್ರಕಾರ ಅಲ್ಲಿಂದ ನೇರ ಬೆಂಗಳೂರಿಗೆ ಪಯಣಬೆಳೆಸಿದೆನು. ಅಲ್ಲಿ ನಿನ್ನ ತಂದೆಯು ಮೃತಪಟ್ಟಿರುವರೆಂಬ ವರ್ತಮಾನವನ್ನು ಕೇಳಿ ಅವರ ಪ್ರೀತಿಗೆ ಪಾತ್ರಳಾದ ನ್ಯಾಕನಾಸಿಯ ಭೇಟಿಯನ್ನು ಮಾಡಿ ನನ್ನ ಗುರುತು ಅವಳಿಗೆ ತಿಳಿಸಿ ಅವಳಿಂದ ಆಗಬೇಕಾದ ಸಹಾಯವನ್ನು ಕೇಳಿದೆನು. ಅದಕ್ಕವಳು ಸಂತೋಷದಿಂದ ಒಪ್ಪಿಕೊಂಡಳು. ಕೂಡಲೆ ನಾವಿಬ್ಬರೂ ಕಲ್ಕತ್ತೆಗೆ ಹೋದೆವು. ಅವಳ ಸಾಹಸದಿಂದ ನಮ್ಮ ಅಂತರಂಗಸುಖದ ಫಲರೂಪವಾದ ನಮ್ಮ ಕುವರನ ಮುಖಕಮಲವನ್ನು ನೋಡಿದೆನು. ಸಂತೋಷದಿಂದ ಮುದ್ದಿಟ್ಟೆನು. ನಿನಗೆ ಯಾವತ್ತೂ ಈ ಸಂಗತಿಯು ಗೊತ್ತಿಲ್ಲವೆಂದೂ ನೀನು

ಪ್ರಸವಿಸಿದ ಮಗುವು ಕೂಡಲೆ ಮೃತಪಟ್ಟಿದೆ ಎಂದು ನಿನಗೆ ತಿಳಿಸಿದ್ದಾರೆಂದೂ ಅದನ್ನು ತನ್ನ ಸ್ನೇಹಿತಳಾದ ಒಬ್ಬ ಮಿಡ್‌ವೈಫ್ ಮೂಲಕ ಒಂದು ಮುಸಲ್ಮಾನ್ ಅನಾಥಾಶ್ರಮಕ್ಕೆ ಕಳುಹಿ ಅದನ್ನು ಸಾಕುವಂತೆ ಏರ್ಪಾಡು ಮಾಡಿರುವೆವೆಂತಲೂ ನ್ಯಾಕಸಾಸಿಯು ತಿಳಿಸಿದಳು. ಮತ್ತು ಅವಳ ಸಹಾಯದಿಂದಲೇ ಅನಾಥಾಶ್ರಮದ ಅಧಿಕಾರಿಯಿಂದ ಆ ಮಗುವನ್ನು ಪಡೆದುಕೊಂಡೆನು. ಅಲ್ಲಿಂದ ಆ ಮಗುವನ್ನು ಕರೆದುಕೊಂಡು ಹರಿದ್ವಾರಕ್ಕೆ ಹೋಗಿ ಅಲ್ಲಿ ಆರ್ಯಸಮಾಜದಲ್ಲಿ ಶುದ್ಧಮಾಡಿ ಕಾಂಗ್ರಿ ಗುರುಕುಲದಲ್ಲಿ ವಿದ್ಯೆ ಕಲಿಯುವುದಕ್ಕಾಗಿ ವ್ಯವಸ್ಥೆ ಮಾಡಿದೆನು.

"ಅಲ್ಲಿಂದ ನಾನು ಪುನಃ ಹಿಮಾಲಯ ಪ್ರದೇಶಗಳಲ್ಲಿ ಸಂಚಾರ ಮಾಡಿಕೊಂಡು ಹಿಂದಿರುಗಿದಾಗ ಆ ಮಗುವನ್ನು ಕರೆದುಕೊಂಡು ಬಂದು ಇಲ್ಲಿಯ ಆರ್ಯಸಮಾಜದ ಕೆಲಸದವರ ಮೂಲಕ ಉಪಾಯಾಂತರಗಳಿಂದ ನಿನ್ನ ಮನೆಯಲ್ಲಿ ಕೆಲಸಕ್ಕೆ ಸೇರುವಂತೆ ವ್ಯವಸ್ಥೆ ಮಾಡಿದೆನು. ಆ ಅಂದಿನ ಮಗುವೇ ಇಂದು ನಿನ್ನ ಮನೆಯಲ್ಲಿರುವ ಧರ್ಮದೇವನು."

ಇದನ್ನೆಲ್ಲಾ ಏಕಾಗ್ರಚಿತ್ತದಿಂದ ಕೇಳುತ್ತಿದ್ದ ಸುಮತಿಯು ಕೂತಲ್ಲಿಯೇ ಫಕ್ಕನೆ ಮೂರ್ಛೆಹೋದಳು.

ಯೋಗೀಶನು ಗಾಬರಿಯಿಂದ ಅವಳನ್ನು ತೊಡೆಯ ಮೇಲೆ ಮಲಗಿಸಿ ನಯನಗಳಿಗೆ ನೀರು ಚಿಮುಕಿಸಿ ನೀರಿನಿಂದ ಮೋರೆಯನ್ನೆಲ್ಲಾ ಸವರಿದನು.

ಸ್ವಲ್ಪ ಹೊತ್ತಿನ ಮೇಲೆ ಮೂರ್ಛೆಯಿಂದ ಎಚ್ಚತ್ತ ಸುಮತಿಯು "ಕಿಟ್ಟೂ! ನಮ್ಮ ಮುಂದಿನ ಗತಿ ಏನೆ"ಂದು ಶೋಕಪೂರ್ಣವಾಗಿ ಪ್ರಶ್ನಿಸಿದಳು.

ಕೃಷ್ಣಜೋಯಿಸನು ಹೇಳಲಾರಂಭಿಸಿದನು: "ಪ್ರಿಯ ಸುಮಾ! ನಮಗಿನ್ನೇನೂ ಉಳಿದಿಲ್ಲ. ನಾನಂತೂ ಸಂಪೂರ್ಣವಿರಕ್ತನಾಗಿದ್ದೇನೆ. ನಿನಗೆ ನಿಜವಾಗಿಯೂ ಮನಶ್ಶಾಂತಿ ಇಲ್ಲ. ನಾವಿನ್ನು ಸಂಸಾರ ಬಂಧನದಲ್ಲಿ ಬೀಳುವುದು ಬೇಡ. ಧರ್ಮದೇವನು ಮಾತ್ರ ನಮ್ಮಿಬ್ಬರ ಮಗನೆಂದು ಅವನಿಗೆ ತಿಳಿಸಬೇಡ. ನಿನ್ನ ಸಂಪತ್ತಿನ ಅಲ್ಪಾಂಶವನ್ನು ಆತನಿಗೆ

೮೦ ಗ ವ ಲ್ಲಿ ಕೊಟ್ಟು ಸುಖವಾಗಿರುವಂತೆ ಹೇಳಿ ಆಶೀರ್ವದಿಸಿ ಕಳುಹಿಸಿಕೊಡು. ಮತ್ತು ಉಳಿದ ಎಲ್ಲಾ ಸಂಪತ್ತನ್ನೂ ದೀನಸೇವೆಗಾಗಿ ಧಾರೆ ಎರೆದು ಈ ಮನೆಯನ್ನು ಸೇವಾಸದನವನ್ನಾಗಿ ಮಾರ್ಪಡಿಸಿ ಅನಾಥ ಮಕ್ಕಳಿಗೂ, ಅನಾಥ ಸ್ತ್ರೀಯರಿಗೂ, ನಿನ್ನ ಕೈಲಾದಷ್ಟು ಸಹಾಯವನ್ನು ಮಾಡಿಕೊಂಡಿರು.''

ಸುಮತಿಯು ಆ ಮಾತಿಗೆ ಸಂತೋಷದಿಂದ ಒಪ್ಪಿಕೊಂಡಳು, ಇಷ್ಟು ಹೇಳಿ ಕೃಷ್ಣಜೋಯಿಸನು ಹೊರಟೇ ಹೋದನು. ಎಲ್ಲಿಗೆ ಎಂಬುದು ಯಾರಿಗೂ ತಿಳಿಯದು.

# ಆನಂದಾ ಸೀರೆ

ನಿಮ್ಮ ಕೈಕೆಳಗಿನ ಗುಮಾಸ್ತರ ಹೆಂಡಿರನ್ನು ನೋಡಿ: ಧರ್ಮಾವರದ ಸೀರೆ, ಎರಡೆರಡು ಜೊತೆ ಬಂಗಾರಬಳೆ—ಎಂದು ಸಿಡಿಮಿಡಿಗೊಂಡಳು ರಮಾ. ಅವಳು ಸಂಸಾರಸೌಕಕ್ಕೆ ಒಲ್ಲೆನೆಂದುದರಿಂದ ರಂಗಣ್ಣನಿಗೆ ಬೇಸರಾಯಿತು . . . ಒಂದು ದಿನ ಒಂದು ಮೂಟೆ ಸೀರೆಗಳನ್ನು ತರಿಸಿ ಯಾವುದು ಬೇಕು ನೋಡು ಎಂದ. ಅವಳು ಸಂತೋಷದಿಂದ ಆನಂದಾ ಸೀರೆಯನ್ನು ಆಯ್ದುಕೊಂಡಳು. ಆದರೆ . .!

ಕತೆಗಾರ್ತಿ

## ಶ್ರೀಮತಿ ಸುಶೀಲ

ಮೈಸೂರಿನ ಶ್ರೀ. ಎಚ್. ಸೀತಾರಾಮರಾಯರ ತಂಗಿ ಇವರು. ವಯಸ್ಸು ೧೭. S. S. L. C. ಪರೀಕ್ಷೆಯಲ್ಲಿ ಉತ್ತಮರೀತಿಯಿಂದ ತೇರ್ಗಡೆಯಾಗಿದ್ದಾರೆ. ಹಿಂದಿಯ ಮಾಧ್ಯಮಿಕ ಪರೀಕ್ಷೆ ಕೊಟ್ಟಿದ್ದಾರೆ. ಇವರು ಇನ್ನೂ ಕೆಲವು ಕತೆಗಳನ್ನು ಬರೆದಿದ್ದಾರೆ. ಇವರ ಕಥನಸರಣಿಯಲ್ಲಿ ಸನ್ನಿವೇಶ ಜೋಡಣೆಯ ಕೊರತೆ ಕಂಡರೂ ಶೈಲಿಯ ಸರಲತೆ ಅದನ್ನು ತುಂಬಿಕೊಡುವಂತಿದೆ. ಇವರಿಂದ ಇನ್ನೂ ಒಳ್ಳೆಯ ಕತೆಗಳು ಒದಗುವವೆಂದು ಕನ್ನಡಿಗರಿಗೆ ನಂಬಿಗೆ ಹುಟ್ಟದಿರದು.

"ಸಂಜೆ ಯಾರ ಮನೆಗೆ ಹೋಗಿದ್ದಿ, ರಮಾ?" ಎಂದು ಕೇಳಿದ ರಂಗಣ್ಣ.

"ಸುಬ್ಬಮ್ಮನವರ ಮನೆಗೆ. ಅವರ ದೊಡ್ಡ ಮಗಳು, ಶಾಂತ ಊರಿಗೆ ಬಂದಿದ್ದಾಳೆ. ನಾನೂ ಅವಳೂ ಮೈಸೂರಿನಲ್ಲಿ ಐದನೇ ತರಗತಿಯಲ್ಲಿ ಓದುತ್ತಿದ್ದೆವು" ಎಂದಳು ರಮಾ.

"ಸಾಯಂಕಾಲ ವಾಕ್ ಬರಬೇಕೆಂದು ಹೇಳಿದ್ದೆ. ಏಕೆ ಬರಲಿಲ್ಲ?" ಎಂದ ರಂಗಣ್ಣ.

ರಮಾ ಕೋಪದಿಂದ, "ಸರಿ, ನಿಮಗೇನು ಹೇಳಿ. ಹೊರಗೆ ಹೊರಟರೆ, ಉಡಲು ಒಂದು ಒಳ್ಳೆ ಸೀರೆಯಿಲ್ಲ; ಒಂದು ಕುಬುಸವಿಲ್ಲ; ಒಡವೆಯಂತೂ ಕೇಳಲೇಬೇಡಿ" ಎಂದಳು.

ಇದನ್ನು ಕೇಳಿ ರಂಗಣ್ಣನ ಮನಸ್ಸು ವ್ಯಾಕುಲಹೊಂದಿದರೂ ನಗುತ್ತಾ "ಒಡವೆ ಏತಕ್ಕೆ ಹೇಳು. ಶಕುಂತಲ ಹೂವಿನಿಂದಲೇ ಅಲಂಕಾರ ಮಾಡಿಕೊಳ್ಳುತ್ತಿದ್ದಳಂತೆ. ಹಾಗೇ ನೀನೂ ಒಂದು ಸಾಧಾರಣ ಸೀರೆಯನ್ನುಟ್ಟು, ಒಂದೋ ಎರಡೋ ಗುಲಾಬಿ ಹೂ ಮುಡಿದರೆ ಎಷ್ಟು ಚೆನ್ನಾಗಿರುತ್ತೆ" ಎಂದ.

ರಮಾಗೆ ಅಷ್ಟರಲ್ಲೇ ಅಳು ಬಂದುಬಿಟ್ಟಿತು. ಅವಳು "ಸರಿ, ನಿಮ್ಮ ವೇದಾಂತ ಗೊತ್ತಿದೆ. ನನ್ನ ಮೇಲೆ ಬಹಳ ಪ್ರೀತಿ, ಪ್ರೀತಿ ಎಂದು ಹೇಳುತ್ತೀರಿ, ಕೇಳಿದರೆ ಒಂದು ಒಡವೆಯಿಲ್ಲ, ಒಂದು ಸೀರೆಯಿಲ್ಲ. ಯಾತಕ್ಕೋ ನೌಕರಿ ಮಾಡುವುದು! ನೋಡಿ, ನಿಮ್ಮ ಆಫೀಸಿನಲ್ಲಿಲ್ಲವೇ, ನಿಮ್ಮ ಕೈಕೆಳಗಿರುವ ಗುಮಾಸ್ತ ಶ್ರೀನಿವಾಸರಾಯರು—ಅವರಿಗೆ ನಿಮಗಿಂತಲೂ ಸಂಬಳ ಕಡಿಮೆ. ಮೊನ್ನೆ ಅವರು ಹೆಂಡತಿಗೆ ಧರ್ಮಾವರದ ಸೀರೆ, ಮಗಳಿಗೆ ಎರಡು ಜೊತೆ ಬಳೆ, ಎಲ್ಲಾ ಮಾಡಿಸಿದ್ದಾರೆ" ಎಂದಳು.

ರಂಗಣ್ಣ ಎಕ್ಸೈಸ್ ಆಫೀಸಿನಲ್ಲಿ ಮುಖ್ಯ ಗುಮಾಸ್ತ. ೭೫ ರೂಪಾಯಿ ಸಂಬಳ ಬರುತ್ತಿತ್ತು. ಇಬ್ಬರು ತಮ್ಮಂದಿರು ಬೆಂಗಳೂರಿನಲ್ಲಿ B. Sc. ಓದುತ್ತಿದ್ದರು. ಅವರಿಗೆ ದುಡ್ಡು ಕಳುಹಿಸುತ್ತಿದ್ದ.

ಉಳಿದ ಹಣದಲ್ಲಿ ರಮಾನೊಂದಿಗೆ ಸುಖವಾಗಿ ಸಂಸಾರ ಮಾಡುತ್ತಿದ್ದ. ರಮಾನೂ ಓದಿದ ಹುಡುಗಿ, ಬಹಳ ಜಾಣೆ. ಆದರೆ ಅವಳಿಗೆ ಒಡವೆ ಸೀರೆಗಳ ಆಸೆ ಹೆಚ್ಚು. ಹೆಂಗಸರೆಲ್ಲರಿಗೂ ಹಾಗೇ.

ರಂಗಣ್ಣ "ಶ್ರೀನಿವಾಸರಾಯರಿಗೇನು, ಅವರು ಎಲ್ಲರ ಹತ್ತಿರ ದಲ್ಲೂ ಲಂಚ ತೆಗೆದುಕೊಳ್ಳುತ್ತಾರೆ. ಒಡವೆ ಮಾಡಿಸುತ್ತಾರೆ. ಅದು ಮಾತ್ರ ಶುದ್ಧ ಹೇಸಿ ಕೆಲಸ" ಎಂದುಕೊಂಡ.

. . . . . . .

ಒಂದು ದಿನ ಸಂಜೆ ರಂಗಣ್ಣ ಮನೆಗೆ ಬೇಗ ಬಂದು "ರಮಾ, ಈ ದಿನ ಸಂಸಾರನೌಕ ಸಿನೀಮ ಇದೆ. ಬರುತ್ತೀಯಾ?" ಎಂದ.

"ನೀವೇ ಹೋಗಿ, ನಾನು ಬರುವುದಿಲ್ಲ" ಎಂದಳು ಅವಳು. ಅದರ ಕಾರಣ ರಂಗಣ್ಣನಿಗೆ ತಕ್ಷಣ ಹೊಳೆಯಿತು. ಏನೂ ಹೇಳದೆ ಹೊರಟುಹೋದ. ಊರುಬಿಟ್ಟು ಬಹಳ ದೂರ ಹೋದ. ಅಲ್ಲೊಂದು ಸೇತುವೆಯ ಮೇಲೆ ಕುಳಿತು ಯೋಚಿಸಿದ:

'ನ್ಯಾಯ, ನೀತಿ, ಧರ್ಮ ಒಂದು ಕಡೆ. ಇದಕ್ಕೆ ಗಂಟು ಹಾಕಿರುವುದು ಕಾರ್ಪಣ್ಯ ಜೀವನ. ಇನ್ನೊಂದು ಕಡೆ ಸೊಗಸು, ಬೆಡಗು, ಹೊಗಳಿಸಿಕೊಳ್ಳುವುದು, 'ಮುಂದಕ್ಕೆ ಬರುವುದು.' ಇದಕ್ಕೆ ಹೆಣೆದುಕೊಂಡಿರುವುದು ಇತರರನ್ನು ಮುಳುಗಿಸಿ ತಾನು ಉದ್ಧಾರವಾಗುವ ಸ್ವಾರ್ಥ....ಆದರೆ ಪ್ರಪಂಚದಲ್ಲಿ ಎಷ್ಟೋ ಜನ ತಮ್ಮ ಇಷ್ಟಗಳನ್ನು ಸಫಲಗೊಳಿಸುವುದಕ್ಕೆ ಏನು ಬೇಕಾದರೂ ಮಾಡುವುದಿಲ್ಲವೇ? ಅಲ್ಲದೆ ಇಂಥವರೇ ಜನರ ಕಣ್ಣಿಗೆ ಆಡಂಬರವಾಗಿ ಕಾಣುವುದು.........
ಆಡಂಬರವೇನು ಕೆಟ್ಟದ್ದೇ? ಅಲ್ಲ, ಯೌವನದಲ್ಲಿ ಅದೂ ಒಂದು ಭೂಷಣ.......ಥೂ, ಕಾರ್ಪಣ್ಯ ಜೀವನದಿಂದ ಸಿಕ್ಕುವುದು ಜೀವಾವಧಿಯ ಕಾರ್ಪಣ್ಯವೇ. ಇದು ಯಾವ ನ್ಯಾಯ?....ರಮಾ ಸೀರೆಯನ್ನು ಕೇಳುತ್ತಿದ್ದಾಳೆ. ತಂದು ಕೊಡಲು ನನ್ನಿಂದಾಗಿಲ್ಲ. ನನ್ನ ಈ ವಯಸ್ಸಿನಲ್ಲಿ ಅಷ್ಟು ಕೂಡ ಸಾಧ್ಯವಾಗದಿದ್ದರೆ, ಇನ್ನು ಯಾವಾಗ?......'

ಮನೆಗೆ ಬಂದು ರಾತ್ರಿ ಊಟ ಮಾಡಿ ರಂಗಣ್ಣ ಮಲಗಿಕೊಂಡ. ನಿದ್ರೆ ಬರಲಿಲ್ಲ. ಪುನಃ ಅದೇ ಯೋಚನೆ 'ಥೂ, ಹಾಳು ಲಂಚ ತೆಗೆದು

ಕೊಂಡು ಬದುಕುವುದಕ್ಕಿಂತ ಸಾಯುವುದು ಮೇಲು . . . . . ಇಲ್ಲ ಇಲ್ಲ, ಬೇರೆ ಉಪಾಯವೇ ಇಲ್ಲ. ಆ ದೇವರೇ ಇಷ್ಟನ್ನೂ ಮಾಡಿಸುವುದು ” ಎಂದು ಮೆಲ್ಲಗೆ ತನ್ನ ತಪ್ಪನ್ನು ದೇವರ ಮೇಲೆ ಹೊರಿಸಿದ.

ಮಾರನೆಯ ದಿನ, ಶನಿವಾರ ಆಫೀಸಿಗೆ ಹತ್ತು ಗಂಟೆಗೇ ಹೋದ. ಚಿಕ್ಕ ಆಗಲೇ ಬಂದು ಬಾಗಿಲು ತೆರೆಯುತ್ತಿದ್ದ. ರಂಗಣ್ಣ ಹೋದವನೇ ತನ್ನ ಕುರ್ಚಿಯ ಮೇಲೆ ಕುಳಿತ. ಅವನ ಮನಸ್ಸು ಲಂಚ, ಧರ್ಮ ಎರಡರ ಮಧ್ಯೆ ಸಿಕ್ಕಿ ತೊಳಲುತ್ತಿತ್ತು. ಅಷ್ಟರಲ್ಲಿ ಚಿಕ್ಕ ಬಂದು :

“ ಸ್ವಾಮಿ, ನಿಮ್ಮನ್ನು ನೋಡಲು ಯಾವನೋ ಬಂದಿದ್ದಾನೆ ” ಎಂದ. ರಂಗಣ್ಣ, “ ನೋಡೋಕೆ ಆಗುವುದಿಲ್ಲ ಅಂತ ಹೇಳು ” ಎನ್ನಲು, ಚಿಕ್ಕ ಹೊರಟುಹೋದ. ಆದರೆ ರಂಗಣ್ಣ ತಕ್ಷಣದಲ್ಲಿ ಎಚ್ಚೆತ್ತು, “ ಚಿಕ್ಕಾ, ಚಿಕ್ಕಾ, ಅವನನ್ನು ಬರಹೇಳು ” ಎಂದ. ಬಂದವನು ತಾಂಡ್ಯದ ಗಾಂಗ್ಯ, ಲಂಬಾಣಿಗರವನು. ಅವನು ಬಂದು ರಂಗಣ್ಣನ ಕಾಲುಗಳನ್ನು ಹಿಡಿದುಕೊಂಡು, “ ದೇವರೂ, ಈ ಸಲ ನನಗೆ ಸಹಾಯಮಾಡಿ ಸ್ವಾಮಿ. ನನಗೆ ಬಹಳ ನಷ್ಟ ಆಗುತ್ತೆ. ಮನೆತುಂಬ ಮಕ್ಕಳು. ನನಗೆ ದಂಡಹಾಕಿ ಜೈಲಿಗೆಳೆದರೆ ಮಕ್ಕಳನ್ನು ನೋಡುವವರಿಲ್ಲ. ಎಲ್ಲಾ ಚಿಕ್ಕವು ” ಎಂದ.

ರಂಗಣ್ಣ ಕಾಲುಗಳನ್ನು ಬಿಡಿಸಿಕೊಂಡು “ ಅದೆಲ್ಲಾ ಆಗೋದಿಲ್ಲ, ಗಾಂಗ್ಯ. ಮಾಡಿದ ತಪ್ಪಿಗೆ ಶಿಕ್ಷೆ ಅನುಭವಿಸಲೇಬೇಕು ” ಎಂದು ಧರ್ಮಬುದ್ಧಿಯಿಂದ ಹೇಳಿದ. ಗಾಂಗ್ಯನು ಎಷ್ಟು ದೈನ್ಯದಿಂದ ಹೇಳಿಕೊಂಡರೂ ಸಾಧ್ಯವಾಗಲಿಲ್ಲ. ಅವನು ಸ್ವಲ್ಪ ಹೊತ್ತು ಯೋಚಿಸಿ, ಸೊಂಟದಿಂದ ಒಂದು ಬಟ್ಟೆ ಚೀಲವನ್ನು ಬಿಚ್ಚಿ, ನೂರು ರೂಪಾಯಿಯ ನೋಟೊಂದನ್ನು ತೆಗೆದು ರಂಗಣ್ಣನ ಕಾಲುಗಳ ಮೇಲಿಟ್ಟು, ದೈನ್ಯದಿಂದ :

“ ಸ್ವಾಮಿ, ಇದನ್ನು ಅರ್ಪಿಸಿಕೊಳ್ಳಿ. ಸಾಹೇಬರಿಗೆ ಹೇಳಿ, ಏನಾದರೂ ಮಾಡಿ ನನ್ನ ಹೆಂಡತಿ ಮಕ್ಕಳನ್ನೂ ನನ್ನನ್ನೂ ಕಾಪಾಡಿ, ದೇವರೂ ” ಎಂದ.

ರಂಗಣ್ಣ ಕೋಪದಿಂದ, “ ಗಾಂಗ್ಯಾ, ಏನು ಮಾಡುತ್ತಿದ್ದಿ ? ಯಾರೊಡನೆ ಮಾತಾಡುತ್ತಿದ್ದಿ ? ನಾನು ಲಂಚ ತೆಗೆದುಕೊಳ್ಳಲೇ ? ಚೆನ್ನಾಯಿತು. ಅಂಥ ಮಾತುಗಳನ್ನು ನನ್ನ ಹತ್ತಿರ ಎತ್ತಕೂಡದು ” ಎಂದ. ಗಾಂಗ್ಯ ಸುಮ್ಮನೆ ನಿಂತಿದ್ದ.

ಗಾಂಗ್ಯನು ಹಿರೇ ತಾಂಡ್ಯದವನು. ಬಡವನಾದರೂ ಅವನ ಆಕಾರ ದರ್ಪಗಳಿಗೆ ಅವನ ತಾಂಡ್ಯದವರು ಹೆದರುತ್ತಿದ್ದರು. ಒಂದು ದಿನ ಗಾಂಗ್ಯನು ತನ್ನ ಸ್ನೇಹಿತ ರಾಮ್ಯನೊಡನೆ ಬೆಳದಿಂಗಳಲ್ಲಿ ಕುಳಿತು ಮಾತಾಡುತ್ತಿದ್ದ. ಅವನು :—

" ನೋಡು ಗಾಂಗ್ಯ, ನಿನ್ನೆ ಸಾರಾಯಿ ಅಂಗಡಿ ಕಾಳಪ್ಪ ಎಷ್ಟು ಮಾತಾಡಿದ ಗೊತ್ತೆ ? ಏನಾದರೂ ಮಾಡಿ ಅವನನ್ನು ಮಟ್ಟ ಹಾಕ ಬೇಕು " ಎಂದ.

ರಾಮ್ಯನಿಗೂ ಕಾಳಪ್ಪನಿಗೂ ಮೊದಲಿನಿಂದ ದ್ವೇಷವಿತ್ತು. ಗಾಂಗ್ಯನು ರಾಮ್ಯನ ಮಾತಿಗೆ ಸುಮ್ಮನಿದ್ದ.

" ನೋಡು ಗಾಂಗ್ಯ, ಈಗೊಂದು ಕೆಲಸ ಮಾಡೋಣ. ಇನ್ನು ಮೇಲೆ ತಿಂಗಳು ಬೆಳಕಿರುವುದಿಲ್ಲ. ನನ್ನ ಮನೆ ಹಿತ್ತಲಲ್ಲಿರುವ ಬಿದಿರು ಮೆಳೆಯ ಮಧ್ಯೆ ಮಡಕೆ ಇಟ್ಟು ಸಾರಾಯಿ ಭಟ್ಟಿ ಇಳಿಸುವ. ಆಗ ಕಾಳಪ್ಪನ ತಲೆ ಮೇಲೆ ಕಲ್ಲು. ಅವನು ಸಾರಾಯಿಗೆ ನೀರು ಬೆರೆಸುತ್ತಾನೆ. ನಾವು ಅಪ್ಪಟ ಸಾರಾಯಿಯನ್ನು ನಂಜಯ್ಯನ ಮೂಲಕ ಮಾರಿಸೋಣ" ಎಂದ ರಾಮ್ಯ.

ಮಾರನೆಯ ದಿನ ಗಾಂಗ್ಯನು ಹೆಂಡತಿ ಮಕ್ಕಳಿಗೆ ಆಶೆ ಹಿಡಿಸಿ ಅವರಲ್ಲಿದ್ದ ಪುಡಿಕಾಸುಗಳನ್ನು ಕಿತ್ತುಕೊಳ್ಳಲು ಯತ್ನಿಸಿದ. ಅವನ ಹೆಂಡತಿ, " ಸಾರಾಯಿ ಕುಡಿಯೋದೆ ಬಹಳ ತಪ್ಪು. ಆ ಕೆಟ್ಟ ಕೆಲಸ ದಿಂದ ನಮಗೆ ಬಹಳ ಒಡತನ ಬಂದಿದೆ " ಎಂದು ಬುದ್ಧಿ ಹೇಳಿದಳು.

ಆಗ ಚಳಿಗಾಲ. ಗಾಂಗ್ಯನ ಮಕ್ಕಳು ಹೊದ್ದಿಕೆ ಇಲ್ಲದೆ ಚಳಿಯಿಂದ ನಡುಗುತ್ತಿದ್ದವು. ಇದನ್ನೆಲ್ಲಾ ಯೋಚಿಸಿ ಗಾಂಗ್ಯ ಅವನ ಹೆಂಡತಿಗೆ, " ನೋಡು ಯಾಡಿ, ಇನ್ನು ಮೇಲೆ ಆ ಹಾಳು ಸಾರಾಯಿಯನ್ನು ಕುಡಿ ಯುವುದಿಲ್ಲ. ನಾನು ಆಣೆ ಮಾಡಿ ಹೇಳುತ್ತೇನೆ " ಎಂದ. ಆ ಮೇಲೆ ಗಾಂಗ್ಯ ರಾಮ್ಯನಿಗೆ, " ನೋಡು ರಾಮ್ಯ, ಸಾರಾಯಿ ಮಾಡಬೇಕೆಂದು ಆ ದಿನವೇನೋ ಹೇಳಿದೆ. ಆದರೆ ಈಗ ನನ್ನ ಮನಸ್ಸು ಬದಲಾಯಿಸಿದೆ " ಎಂದು ಹೇಳಿದ.

ಅದಕ್ಕೆ ರಾಮ್ಯ ಒಪ್ಪದೆ, "ನೀನೇನಾದರೂ ಮಾಡು. ಆ ಕಾಳಪ್ಪನ ಮುಯ್ಯ ತೀರಿಸಿಕೊಳ್ಳದಿದ್ದರೆ ನನ್ನ ಹೆಸರು ರಾಮ್ಯನೇ ಅಲ್ಲ" ಎಂದ. ರಾಮ್ಯ ತನ್ನ ಕೆಲಸವನ್ನು ತಾನು ಮಾಡೇ ಮಾಡಿದ.

ಒಂದು ದಿನ ರಾತ್ರಿ ೧೨ ಗಂಟೆಗೆ ಗಾಂಗ್ಯನ ಮನೆಯಲ್ಲಿ ಬಹಳ ಕೋಲಾಹಲವೆದ್ದಿತು. ಗಾಂಗ್ಯನು, "ಸ್ವಾಮಿ, ನಾನಲ್ಲ ಆ ಕೆಲಸ ಮಾಡಿಸಿದವನು. ರಾಮ್ಯ ಮಾಡಿದ್ದು. ನನ್ನ ಹೆಂಡತಿ ಮಕ್ಕಳ ಮೇಲೆ ಕಲ್ಲೆಳೆಯಬೇಡಿ ಸ್ವಾಮಿ" ಎಂದು ಗೋಳಿಡುತ್ತಿದ್ದ.

ಎಕ್ಸೈಸ್ ಆಫೀಸರೊಬ್ಬರು ಆ ರಾತ್ರಿ ಗುಮಾನಿಯಿಂದ ಗಾಂಗ್ಯನ ತಾಂಡ್ಯಕ್ಕೆ ನುಗ್ಗಿ ಅವನ ಮನೆಯ ಸಾಮಾನುಗಳನ್ನೆಲ್ಲಾ ಆಳುಗಳಿಂದ ಹೊರಗೆ ಹಾಕಿಸಿದ್ದರು. ಒಂದು ಕಡೆ ಒಂದು ದೊಡ್ಡ ಮಡಕೆಯಿತ್ತು. ಅದರ ತುಂಬಾ ಬೆಲ್ಲದ ನೀರು ಮತ್ತು ಬೇಲದ ಚೆಕ್ಕೆಗಳು. ಮಡಕೆಗೆ ಮುಚ್ಚಳವೊಂದನ್ನು ಸಗಣಿ ಮತ್ತು ಮಣ್ಣಿನಿಂದ ಮೆತ್ತಿ ಹಾಕಿತ್ತು. ಮುಚ್ಚಳದ ಮೂಲಕ ಒಂದು ಬಿದಿರು ಕೊಳವೆ, ಅದರ ಕೊನೆಯಲ್ಲಿ ಭಟ್ಟಿ ಬಂದ ಸಾರಾಯನ್ನು ಹಿಡಿಯುವುದಕ್ಕೆ ಇನ್ನೊಂದು ಗಡಿಗೆ. ಒಂದೆರಡು ಹರವಿಗಳಲ್ಲಿ ಸಾರಾಯಿ– ಇವೇ ಮುಂತಾಗಿ ಸಾರಾಯಿ ಭಟ್ಟಿ ಇಳಿಸುವ ಸಲಕರಣೆಗಳೆಲ್ಲವೂ ಸಿಕ್ಕಿದ್ದವು.

ಆಫೀಸರು ಗಾಂಗ್ಯನ ಮಾತನ್ನು ಗಮನಿಸದೆ ರೇಗಿಕೊಂಡು, "ನೋಡು ಗಾಂಗ್ಯ, ನೀನು ಈ ಕಳ್ಳಕೆಲಸವನ್ನು ಮಾಡಿದ್ದಕ್ಕೆ ಈ ಮಡಕೆಗಳೇ ಸಾಕ್ಷಿ" ಎಂದರು. ಅವರು ರಾಮ್ಯನನ್ನೂ ಜೊತೆಯಲ್ಲೇ ಕರೆದುಕೊಂಡು ಹೋದರು.

ಅದು ಆದದ್ದು ಇಷ್ಟು: ರಾಮ್ಯನ ಸ್ನೇಹಿತನೊಬ್ಬನು ಆಫೀಸರ ಹತ್ತಿರ ಕೆಲಸದಲ್ಲಿದ್ದ. ಅವನು ಅವರು ತಾಂಡ್ಯಕ್ಕೆ ಬರುತ್ತಾರೆಂದು ಎರಡು ದಿನಗಳ ಕೆಳಗೆ ಸೂಚನೆ ಕೊಟ್ಟಿದ್ದ. ರಾಮ್ಯ ತಾನು ತಪ್ಪಿಸಿಕೊಳ್ಳಬೇಕೆಂದು, ಗಾಂಗ್ಯನು ಮನೆಯಲ್ಲಿಲ್ಲದಿದ್ದಾಗ, ಅವನ ಹೆಂಡತಿಯನ್ನು ಹೆದರಿಸಿ ಆ ಸಾಮಾನುಗಳನ್ನೆಲ್ಲಾ ಅಲ್ಲಿಟ್ಟಿದ್ದ. ಸರಿ, ಆಫೀಸರು ಹೆಚ್ಚು ಶ್ರಮವಿಲ್ಲದೆ ಗಾಂಗ್ಯನನ್ನು ಹಿಡಿದರು. ಗಾಂಗ್ಯನು ತಾನು ನಿರಪರಾಧಿಯಾದರೂ ತನಗೆ ೫೦೦–೬೦೦ ರೂಪಾಯಿಗಳ ಜುಲ್ಮಾನೆಯೂ,

ಜೈಲೂ ಆಗುವುದೆಂದು ತನ್ನ ಹೆಂಡತಿಯ ಕೊರಳಲ್ಲಿದ್ದ ಗುಂಡಿನ ಅಡ್ಡಿಕೆಯನ್ನು ಮಾರಿ ನೂರು ರೂಪಾಯಿ ತಂದು ರಂಗಣ್ಣನಿಗೆ ಕೊಟ್ಟು, ಅವನ ಸಹಾಯದಿಂದ ತಪ್ಪಿಸಿಕೊಳ್ಳಬೇಕೆಂದು ಇದ್ದ. ಆದುದರಿಂದಲೇ ಅವನು ರಂಗಣ್ಣನಿಗೆ ನೂರು ರೂಪಾಯಿ ಕೊಡಲು ಬಂದದ್ದು.

ರಂಗಣ್ಣ ಬಹಳ ಯೋಚಿಸಿ ಕೊನೆಗೆ ಗಾಂಗ್ಯನ ನೋಟನ್ನು ತೆಗೆದುಕೊಂಡು, ''ಆಗಲಿ ನೋಡುತ್ತೇನೆ, ನಾಳೆಯೋ ನಾಡದ್ದೋ ಬಾ'' ಎಂದ.

ರಂಗಣ್ಣ ಆಫೀಸು ಮುಗಿದೊಡನೆಯೇ ಕೃಷ್ಣಶೆಟ್ಟಿ ಅಂಗಡಿಗೆ ಹೋಗಿ ಐದಾರು ಜರತಾರಿ ಸೀರೆಗಳನ್ನು ಕಟ್ಟಿಸಿಕೊಂಡು ಮನೆಗೆ ಬಂದ. ಬಾಗಿಲ ತಟ್ಟಿದ ಶಬ್ದ ಕೇಳಿ ರಮಾ ಬಾಗಿಲು ತೆಗೆದಳು. ರಂಗಣ್ಣನ ಜೊತೆಯಲ್ಲಿ ಬಂದಿದ್ದ ಜವಾನನ ತಲೆಯ ಮೇಲೆ ಗಂಟನ್ನು ನೋಡಿ, 'ಏನೋ ಆಫೀಸಿನ ಕಾಗದಗಳೆ'ಂದುಕೊಂಡು ಒಳಗೆ ಕಾಫಿ ತರಲು ಹೊರಟು ಹೋದಳು.

ರಂಗಣ್ಣ, ''ರಮಾ, ರಮಾ, ಇಲ್ಲಿ ನೋಡು ಬಾ'' ಎಂದ.

ರಮಾ ಐದು ನಿಮಿಷದ ಮೇಲೆ ಒಂದು ಲೋಟದಲ್ಲಿ ಕಾಫೀನೂ, ಒಂದು ತಟ್ಟೆಯಲ್ಲಿ ಎರಡು ಚಕ್ಕುಲಿಯನ್ನೂ ತೆಗೆದುಕೊಂಡು ಬಂದಳು.

ರಂಗಣ್ಣ, ''ಇಲ್ಲಿ ನೋಡು ರಮಾ, ನಿನಗೆ ಯಾವ ಸೀರೆ ಬೇಕೋ ಅದನ್ನು ತೆಗೆದುಕೋ'' ಎಂದ.

ರಮಾ ಎಲ್ಲಾ ಸೀರೆಗಳ ಅಂಚು, ಸೆರಗು, ಮತ್ತು ಒಡಲನ್ನು ರತ್ನವನ್ನು ಕೊಳ್ಳುವಾಗ ಪರೀಕ್ಷಿಸುವಂತೆ ಪರೀಕ್ಷಿಸಿದಳು. ಕೊನೆಗೆ 'ಆನಂದಾ' ಬಣ್ಣದ ಎರಡು ಬೆರಳಗಲ ಜರತಾರಿಯಿರುವ ಸೀರೆಯನ್ನು ಒಪ್ಪಿದಳು. ಅದಕ್ಕೆ ಹೊಂದುವ ಹಾಗೆ ರೋಜ್ ಕಲರಿನ ಕುಪ್ಪಸದ ಬಟ್ಟೆಯನ್ನು ತೆಗೆದುಕೊಂಡಳು.

ಮಾರನೆಯ ದಿನ ರಂಗಣ್ಣನಿಗೆ ರಜವಿತ್ತು. ಬೆಳಿಗ್ಗೆಯೆಲ್ಲಾ ದರ್ಜಿಯ ಅಂಗಡಿಯಲ್ಲೇ ಕುಳಿತು ಕುಪ್ಪಸವನ್ನು ಹೊಲಿಸಿಕೊಂಡು ಬಂದನು. ಸಂಜೆಗೆ ರಮಾ ಮನೆಯಲ್ಲಿ ನೀರುಹಾಕಿ ಬೆಳಸಿದ ಎರಡು ಅಗಲವಾದ ಪನ್ನೀರು ಗುಲಾಬಿಹೂಗಳನ್ನು ಮುಡಿದಳು. ಹೊಸ ಸೀರೆಯನ್ನು

ನೆರಿ ಹಿಡಿದು, ಅರಿಸಿನವನ್ನು ತುದಿಗಳಿಗೆ ಹಚ್ಚಿ ದೇವರಮುಂದಿಟ್ಟು ನಮಸ್ಕಾರಮಾಡಿ ಉಟ್ಟುಕೊಂಡಳು. ಕುಪ್ಪಸವನ್ನು ತೊಟ್ಟಳು. ಒಂದು ತಟ್ಟೆಯಲ್ಲಿ ನಾಲ್ಕು ರಸಬಾಳೆಹಣ್ಣನ್ನೂ ಹೆಚ್ಚಿದ ಸೇಬಿನ ಹಣ್ಣನ್ನೂ ಒಂದು ಲೋಟ ನೀರನ್ನೂ ತೆಗೆದುಕೊಂಡು ರಂಗಣ್ಣನ ಚಿಕ್ಕಮನೆಗೆ ಹೋದಳು. ರಂಗಣ್ಣ ಕುರ್ಚಿಯ ಮೇಲೆ ಕುಳಿತು ಮೇಜಿನ ಮೇಲೆ ಮೊಣಕೈಯೂರಿ, ಎರಡು ಅಂಗೈಗಳಿಂದ ಕೆನ್ನೆಯನ್ನು ಒತ್ತಿಕೊಂಡು ಏನನ್ನೋ ಯೋಚಿಸುತ್ತಾ ಕುಳಿತಿದ್ದ. ರಮಾ ತಟ್ಟೆಯನ್ನೂ ಲೋಟವನ್ನೂ ಮೇಜಿನ ಮೇಲಿಟ್ಟು ಕುರ್ಚಿಯ ಹಿಂದುಗಡೆ ರಂಗಣ್ಣನ ಕ್ರಾಪಿನಲ್ಲಿ ಬೆರಳಾಡಿಸುತ್ತ ನಿಂತಳು. ಆದರೆ ರಮಾ ಬಂದದ್ದನ್ನು ಅವನು ಗಮನಿಸಲೇ ಇಲ್ಲ. ಕೊನೆಗೆ ರಮಾಳೇ ಅವನ ಮುಂದೆ ಬಂದು, "ಏನು ಇಷ್ಟು ಚಿಂತೆ? ನಾನು ಎಷ್ಟೋ ದಿನದಿಂದ ಆಸೆಪಟ್ಟ ಸೀರೆಯನ್ನು ನೀವೆ ತಂದಿದ್ದೀರಿ. ನಿಮ್ಮ ಚಿಂತೆಯ ಕಾರಣವನ್ನು ಹೇಳಲೇಬೇಕು" ಎಂದು ಕಾತರದಿಂದ ಅವನನ್ನು ನೋಡಿದಳು. ರಂಗಣ್ಣ "ಏನೂ ಇಲ್ಲ, ರಮಾ" ಎಂದನು.

ರಮಾ, "ಏನೋ ನಡೆದಿರಬೇಕು ಆಫೀಸಿನಲ್ಲಿ. ಸಾಹೇಬರೇನಾದರೂ ಅಂದರೇ? ಏನಾಯಿತು ಹೇಳಿ?" ಎಂದು ಬೇಡಿಕೊಂಡಳು.

ಅವಳ ಮನಸ್ಸಿನಲ್ಲಿ, ತಾನು ಸೀರೆ ಉಟ್ಟು, ಜಡೆ ಹಾಕಿಕೊಂಡು, ಹೂ ಮುಡಿದು, ರಂಗಣ್ಣನ ಜೊತೆಯಲ್ಲಿ ವಾಕ್ ಹೋಗಿ ನಕ್ಕು ನಲಿಯಬೇಕೆಂದಿದ್ದಳು. ಆದರೆ ಅವಳ ಆಸೆಯೆಲ್ಲಾ ಅರಳು ರಾಶಿಗೆ ನೀರು ಬಿದ್ದ ಹಾಗೆ, ರಂಗಣ್ಣನ ಚಿಂತೆಯನ್ನು ನೋಡಿ ಕುಗ್ಗಿಹೋಯಿತು. ರಂಗಣ್ಣ, 'ಲಂಚ ಲಂಚ' ಎಂದು ಎರಡು ಸಲ ಹೇಳಿದ. ಮುಂದೆ ಮಾತನಾಡಲು ಆಗಲಿಲ್ಲ. ಸ್ವಲ್ಪ ಹೊತ್ತಿನ ಮೇಲೆ ಅವನು:

"ನೋಡು ರಮಾ, ನಾನು ಎಷ್ಟೋ ದಿನಗಳಿಂದ ಮಾಡಬಾರದೆಂದಿದ್ದ ಕೆಲಸವನ್ನು ಮಾಡಿದೆ. ಆ ಲಂಚ ತೆಗೆದುಕೊಳ್ಳಲು ಎಷ್ಟು ಸುಸಮಯಗಳಿದ್ದುವು? ಆದರೆ ಲಂಚವನ್ನು ತೆಗೆದುಕೊಳ್ಳುವುದು ಪಾಪವೆಂದುಕೊಂಡು ಬಿಟ್ಟಿದ್ದೆ. ಆದರೆ...." ಎಂದು ನಿಲ್ಲಿಸಿದ.

ಅ
ನು
ದಾ
ಸೀ
ದೆ

ರಮಾ, "ಆದರೆ ಎಂದು ನಿಲ್ಲಿಸಿದಿರಲ್ಲಾ, ಪೂರ್ತಿ ಹೇಳಿ" ಎಂದಳು.

ರಂಗಣ್ಣ "ಆದರೆ ನೋಡು; ಮೊನ್ನೆ ಲಂಚಾಣಿಗರ ಗಾಂಗ್ಯ ಒಂದು ಸಾರಾಯಿ ಕೇಸಿನಲ್ಲಿ ಸಿಕ್ಕಿಬಿದ್ದ. ಒಂದು ನೂರು ರೂಪಾಯಿಯನ್ನು ಕೊಟ್ಟು ಕಾಪಾಡಬೇಕೆಂದು ಬೇಡಿಕೊಂಡ. ಪಾಪ, ಅವನಿಗೆ ಮನೆ ತುಂಬಾ ಚಿಕ್ಕ ಚಿಕ್ಕ ಮಕ್ಕಳು. ನಾನೂ ದೂರಾಲೋಚನೆ ಇಲ್ಲದೆ ಅದನ್ನು ತೆಗೆದುಕೊಂಡೆ. ಅದರಲ್ಲೇ ನಿನಗೆ ಸೀರೆ ತಂದದ್ದು" ಎಂದ.

ರಮಾಗೆ ಮಿಂಚಿನ ವೇಗದಲ್ಲಿ ಎಲ್ಲಾ ಹೊಳೆಯಿತು. ಅವಳು ಸ್ವಲ್ಪ ಹೊತ್ತು ಸುಮ್ಮನಿದ್ದು "ಹೋಗಲಿ, ಹಣ್ಣು ತಿನ್ನಿ" ಎಂದಳು. ರಂಗಣ್ಣ, "ನೀನೂ ಸ್ವಲ್ಪ ತೆಗೆದುಕೋ" ಎಂದ. ರಮಾ ಎರಡು ಹೋಳು ನೇರಳೆ ಹಣ್ಣನ್ನು ತಿಂದು ಒಳಗೆ ಕೆಲಸಕ್ಕೆ ಹೋದಳು. ರಂಗಣ್ಣನ ಸ್ನೇಹಿತ ಬಂದು ಅವನನ್ನು ವಾಕ್ ಕರೆದುಕೊಂಡು ಹೋದ.

ರಮಾಗೆ ಯಾವ ಕೆಲಸ ಮಾಡಲೂ ತೋರಲಿಲ್ಲ. ತನ್ನ ಒಡವೆ–ಸೀರೆ ಆಸೆಗೆ ತನ್ನನ್ನು ತಾನೇ ಹಳಿದುಕೊಂಡಳು. ಇನ್ನು ಎಂದೆಂದಿಗೂ ಆ ವಿಷಯವನ್ನು ಎತ್ತಬಾರದೆಂದುಕೊಂಡಳು. ಗಂಡನನ್ನು ಹಿಂಸೆಪಡಿಸಿದ್ದಕ್ಕಾಗಿ ಬಹಳ ಪಶ್ಚಾತ್ತಾಪಪಟ್ಟುಕೊಂಡಳು.

ರಾತ್ರಿ ಊಟವಾದ ಮೇಲೆ ರಮಾ "ನಾನೊಂದು ಕೇಳ್ತೀನಿ. ಅದನ್ನು ನಡೆಸಿಕೊಡಬೇಕು" ಎಂದಳು. ರಂಗಣ್ಣ ಕೇಳುತ್ತೇನೆಂದು ಭರವಸೆ ಕೊಟ್ಟ.

"ನೋಡಿ, ನನ್ನ ಕೈಯಲ್ಲಿ ಒಂದು ಜೊತೆ ಚಿನ್ನದ ಬಳೆ ಇತ್ತಲ್ಲ, ಅದು ಮುರಿದುಹೋಗಿದೆ. ಈಗ ಅದನ್ನು ಮಾರಿ ಆ ನೂರು ರೂಪಾಯಿಯನ್ನು ಗಾಂಗ್ಯನಿಗೆ ಕೊಡಿ" ಎಂದಳು. ರಂಗಣ್ಣ ಇದಕ್ಕೆ ಮೊದಲು ಒಪ್ಪಲಿಲ್ಲ. ಕೊನೆಗೆ ರಮಾನ ಬಲವಂತದಿಂದ ಸಮ್ಮತಿಸಿದ.

ಮರುದಿನ ರಂಗಣ್ಣ ಆ ಕೇಸಿನ ನಿಜ ಸಂಗತಿಯನ್ನೆಲ್ಲ ಆಫೀಸರಿಗೆ ಹೇಳಿದ. ರಾಮ್ಯನೂ ತನ್ನ ಅಪರಾಧವನ್ನು ಒಪ್ಪಿಕೊಂಡ. ಗಾಂಗ್ಯನೂ ನಿರಪರಾಧಿಯೆಂದು ಬಿಡುಗಡೆ ಹೊಂದಿದ. ಅವನು ರಂಗಣ್ಣನಿಗೆ ಕೃತಜ್ಞತೆಯ ವಂದನೆಗಳನ್ನು ಅರ್ಪಿಸಿ ಹೊರಡುವಾಗ ಅವನ ಹಣವೂ ಅವನ ಕೈಲಿ ಇತ್ತು.

# ಹುಚ್ಚು

ಪ್ರಪಂಚದ ಘಟನೆ ವಿಚಿತ್ರ. ಮಾನವನಿಗೆ ಹೊಳೆಯುವ ಅದರ ಅರ್ಥ ಮತ್ತಷ್ಟು ವಿಚಿತ್ರ. ಪರೋಪಕಾರವೂ ಪಾಪವಾಗಬಹುದಂತೆ! ಮಿ. ಜೇಮ್ಸನಿಂದ ಬದುಕಿಕೊಂಡವನ ಶಾಪ ಐರಿಸಿನ ಮೇಲೆ ಬಿದ್ದಿತಂತೆ! ಅವನಿಗೆ ಮಗುವಾಗಬಾರದಿತ್ತಂತೆ! ಅವನು ಮದುವೆಯಾಗಬಾರದಿತ್ತಂತೆ! ಅವನು ಹುಟ್ಟಬಾರದಿತ್ತಂತೆ! ಎಲ್ಲ ಹುಚ್ಚು!

ಕತೆಗಾರ್ತಿ

## ಕುಮಾರಿ ಪದ್ಮಾವತಿ

ಕೊಡಗಿನ ಶ್ರೀ. ಕೆ. ಪಿ. ಚಿನ್ನಪ್ಪನವರ ಮಕ್ಕಳಿವರು. ವಯಸ್ಸು ೨೩ ವರುಷ. ೧೪ ನೆಯ ವಯಸ್ಸಿನಲ್ಲಿ ಡೆಹರಾಡೂನಿನ ಕನ್ಯಾ ಗುರುಕುಲದ ಗಾಯನವಾದನಶಿಕ್ಷಕಿಯರಾಗಿ ಇವರು ನಿಯಮಿಸಲ್ಪಟ್ಟರು. ಅಲ್ಲಿಯೇ ಇವರು ಹಿಂದಿಯನ್ನು ಕಲಿತುಕೊಂಡು 'ಪ್ರಭಾಕರ (Hon)' ಪರೀಕ್ಷೆಯನ್ನು ಪ್ರಥಮ ವರ್ಗದಲ್ಲಿ ಮಾತ್ರವಲ್ಲ, ಪಂಜಾಬ ವಿಶ್ವವಿದ್ಯಾಲಯಕ್ಕೆ ದ್ವಿತೀಯರಾಗಿ ಉತ್ತರಿಸಿದರು (೧೯೩೩). ಆ ಬಳಿಕ ಇವರು ಬೆಂಗಳೂರಿನಲ್ಲಿ ಕೆಲಕಾಲ ಮೂರು ಸ್ತ್ರೀಸಮಾಜಗಳಲ್ಲಿ ಹಿಂದಿಯನ್ನು ಕಲಿಸುತ್ತಲಿದ್ದರು. ೧೯೩೪ ನೆಯ ಸಪ್ಟಂಬರಿನಲ್ಲಿ ಶ್ರೀಮತಿ ತಾತಾ ಅವರಿಂದ ಸೋಸಿಯಲ್ ವೆಲ್ ಫೇರಿನ ಮತ್ತು ರೂರಲ್ ರಿಕನ್ಸ್ಟ್ರಕ್ಷನ್ನಿನ ಅಭ್ಯಾಸಕ್ಕಾಗಿ ಶಿಷ್ಯವೃತ್ತಿಯನ್ನು ಪಡೆದು ಲಂಡನ್ನಿಗೆ ಹೋಗಿದ್ದಾರೆ. ನಾಳಿನ ನವಂಬರಿನಲ್ಲಿ ತಿರುಗಿ ಮಾತೃಭೂಮಿಗೆ ಬರುತ್ತಾರೆ.

ಕುಮಾರಿ ಪದ್ಮಾವತಿಯವರ ಹಿಂದೀಲೇಖನಗಳು 'ವಿಶಾಲ ಭಾರತ' ದಲ್ಲಿಯೂ ಕನ್ನಡ ಬರಹಗಳು ಹಲವು ಪತ್ರಿಕೆಗಳಲ್ಲಿಯೂ ಪ್ರಕಟವಾಗಿವೆ. ಕನ್ನಡದಲ್ಲಿ ಇವರ ಬರಹಕ್ಕೆ ಜನ ಮೆಚ್ಚುಗೆ ಇದ್ದಂತೆಯೆ ಹಿಂದಿಯಲ್ಲಿಯೂ ಉಂಟು. ಕನ್ನಡದಲ್ಲಿ ಇವರು ಸಹಜ ಸರಲವಾದ ಸಾಮಾನ್ಯ ಭಾಷೆಯಲ್ಲಿ ಕತೆ ಬರೆದು ಜನರ ಅಭಿಮಾನವನ್ನು ಗಳಿಸಬಲ್ಲರು. ಸದ್ಯದಕತೆ ಇಂಗ್ಲಂಡಿನ ಸನ್ನಿವೇಶವಾಗಿರುವುದರಿಂದ, ಇದರೊಳಗಿನ ಗುಟ್ಟೇ ಒಂದು ವಿಚಿತ್ರವಾಗಿದ್ದು ಹುಳಿಮಧುರವಾಗಿದೆ.

ಪ್ರಪಂಚದ ದೃಷ್ಟಿಯಲ್ಲಿ ನಾನೊಬ್ಬ ಒಳ್ಳೇ ಸ್ವಭಾವದ ಮನುಷ್ಯ. ಪರರ ಅಹಿತವನ್ನು ಬಯಸದವ, ಸಾಧ್ಯವಾದರೆ ಪರರಿಗೆ ಸಹಾಯ ಮಾಡುವವ. ನನ್ನ ಪ್ರಪಂಚ ಅಷ್ಟು ದೊಡ್ಡದಲ್ಲ. ನನ್ನ ಚಿಕ್ಕ ಹಳ್ಳಿಯೇ ನನ್ನ ಪ್ರಪಂಚ. ಅದರ ಜನಸಂಖ್ಯೆ ಸುಮಾರು ನೂರು ಇರಬಹುದು. ಜನರ ಅಭಿಪ್ರಾಯದಲ್ಲಿ ಹಳ್ಳಿಯವರ ಜೀವನದಲ್ಲಿ, ಪಟ್ಟಣಿಗರಂತೆ ತುಂಬಾ ತೊಡಕುಗಳಿಲ್ಲ. ಇದರಲ್ಲಿ ಸತ್ಯಾಂಶವಿರಬಹುದು. ಚಿಕ್ಕ ಹಳ್ಳಿಗಳಲ್ಲಿ ನೆರೆ ಹುಚ್ಚು

ಬರುವುದಕ್ಕೆ ದೊಡ್ಡ ಹೊಳೆಗಳಂತೆ ತುಂಬಾ ಮಳೆ ಬೇಡ. ಶಾಂತವಾದ ಸರೋವರದಲ್ಲಿ ಚಿಕ್ಕ ಕಲ್ಲುಗಳು ಕೂಡಾ ತೆರೆಗಳನ್ನು ಎಳಿಸುವವು. ಆದರೆ ಅವೇ ಕಲ್ಲುಗಳು ಅಶಾಂತ ಸಮುದ್ರದಲ್ಲಿ ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳುವವು. ಹಾಗೆಯೇ ಪಟ್ಟಣಿಗರಿಗೆ ಸಾಧಾರಣವಾಗಿ ತೋರುವ ಘಟನೆಗಳಲ್ಲಿ, ಹಳ್ಳಿಯವರಿಗೆ ಬಿರುಗಾಳಿ ಇರಬಹುದು; ಬರಸಿಡಿಲು, ಮಿಂಚು, ಮಳೆ ಇರಬಹುದು. ಅಂತೆಯೇ ನನ್ನ ಜೀವಮಾನದಲ್ಲಿ ಕೆಲವು ತೊಡರುಗಳು ಬಂದಿವೆ. ಆ ಸಂದರ್ಭಗಳಲ್ಲಿ ನನಗೆ ಎಲ್ಲವೂ ಹುಚ್ಚು ಎಂದು ತೋರಿದೆ. ಹಿಂದಿನ ಜೀವನ, ಈಗಿನ ಜೀವನ ಮತ್ತು ಮುಂದಿನ ಜೀವನ, ಎಲ್ಲವೂ ಹುಚ್ಚಾಟದಿಂದ ತುಂಬಿರುವುದಾಗಿ ತೋರುವುದು. ಮದುವೆ, ಮುಂಜಿ, ಸಂಸಾರ, ಬಾಳು, ಬದುಕು ಎಲ್ಲವೂ ಹುಚ್ಚೇ!

ಹಿಂದಿನ ವರುಷದ ಮಾತು. ಇಂಗ್ಲೆಂಡಿನ ಬೇಸಗೆಯಲ್ಲಿ ಆಗಿನ ಸಲ ವಿಪರೀತ ಕಾವು ಇತ್ತು. ನನ್ನ ಬೇಸಗೆಯನ್ನು ಪರ್ವತಗಳ ಮೇಲೆ ಕಳೆಯೋಣವೆಂದರೆ ರೊಕ್ಕ ಬೇಕು. ಶ್ರೀಮಂತರ ಕುಲದಲ್ಲಿ ಹುಟ್ಟಿದವಳಲ್ಲವೆಂದು ನನಗೆ ಬೇಸರವಿಲ್ಲ. ನನ್ನ ಕುಟುಂಬವೇ ನನಗೆ ಸರ್ವಸ್ವ. ನನ್ನ ಸುಖದುಃಖಗಳ ಪಾಲುಗಾರ್ತಿ ನನ್ನ ಎಡನಾ. ದಿನವೆಲ್ಲಾ ದುಡಿದು ಮನೆಗೆ ಬರುವಾಗ ಅಪ್ಪಾ ಎಂದು ಬಂದು ತಬ್ಬಿಕೊಳ್ಳುವ ನನ್ನ ಕಣ್ಮಣಿ ಐರಿಸ್ (Iris). ಐರಿಸ್ ಎರಡು ವರುಷದ ದುಂಡು ದುಂಡಾದ ಮಗು ಆವಾಗ. ಮೆಡಿಟರೇನಿಯನ್ ಆಕಾಶದ ಬಣ್ಣ ಅಚ್ಚ ನೀಲವೆಂದು ನಾನು ಹೈಸ್ಕೂಲಿನಲ್ಲಿ ಓದುತ್ತಿದ್ದಾಗ ಕೇಳಿದ್ದೆನು. ಹಾಗಿದ್ದರೆ ನಾನು ಮೆಡಿಟರೇನಿಯನ್ ಆಕಾಶವನ್ನು ನೋಡಬೇಕಾದುದಿಲ್ಲ. ನನ್ನ ಮುದ್ದಿನ ಐರಿಸಿನ ಕಣ್ಣುಗಳಲ್ಲಿ ಆ ಅಚ್ಚ ನೀಲವರ್ಣ ಕಾಣಬಹುದಲ್ಲವೇ! ಅಂತಹ ಮುದ್ದಾದ ಕಣ್ಣುಗಳು. ಐರಿಸನ್ನು ನಾಮಸಂಸ್ಕಾರಕ್ಕೆ ಚರ್ಚಿಗೆ ಕರೆದುಕೊಂಡು ಹೋಗಿದ್ದಾಗ, ಪಾದರಿಸಾಹೇಬರು "ಎಂತಹ ಮುದ್ದಾದ ಕಣ್ಣುಗಳು! ಮಿಸೆಸ್ ಜೇಮ್ಸ್, ನೀವಿಬ್ಬರು ಪುಣ್ಯವಂತರು. ಐರಿಸ್ ಗ್ರಾಮದ ಪುತ್ತಳಿಯು" ಎಂದರು.

ಶನಿವಾರಕ್ಕೆ ನನಗೆ ಆಫೀಸಿನಲ್ಲಿ ಕೆಲಸ ಇರುವುದು ಕೇವಲ ಮಧ್ಯಾಹ್ನದವರೆಗೆ. ಯಥಾಪ್ರಕಾರ ನಾನು ನನ್ನ ಕೆಲಸ ಮುಗಿಸಿ

ಮನೆಗೆ ಬರುತ್ತಿದ್ದೆನು. ಬಿಸಿಲಿನ ಝಳ ತುಂಬಾ ಇತ್ತು. ಆದರಲ್ಲಿಯೂ ನಾನು ಉಣ್ಣೆಯ ಬಟ್ಟೆ ತೊಟ್ಟುಕೊಂಡಿದ್ದೆನು. ಇದು ಇಂಗ್ಲೆಂಡಿನ ಹಠ. ಬೇಸಗೆಯಾಗಲಿ, ಚಳಿಗಾಲವಾಗಲಿ ಗಂಡಸರು ಯಾವಾಗಲೂ ಉಣ್ಣೆಯ ಕೋಟು ಮತ್ತು ಶರಾಯಿ ಧರಿಸಬೇಕು. ಆಫೀಸಿನಿಂದ ಮನೆಗೆ ಒಂದು ಮೈಲು ಇರಬಹುದು. ಬಹಳ ಜರೂರಾಗಿ ನಡೆಯೋಣವೆಂದರೆ ತುಂಬಾ ಸೆಕೆ. ಬೆವರಿನಿಂದ ಮತ್ತಷ್ಟು ಸೆಕೆ ಹೆಚ್ಚುವುದು. ಅದರ ಮೇಲೆ ಆ ದಿನ ಗಾಳಿಯು ತಟಸ್ಥವಾಗಿತ್ತು. ಆಫೀಸಿನಿಂದ ಮನೆಗೆ ಹೋಗುವ ರೋಡು ನಮ್ಮ ಹಳ್ಳಿಯ ಕೆರೆಯ ಮಗ್ಗುಲಲ್ಲಿ ಸ್ವಲ್ಪದೂರದವರೆಗೆ ಹೋಗುತ್ತದೆ. ಇಂತಹ ಮಟಮಟ ಮಧ್ಯಾಹ್ನದಲ್ಲಿ ಕೆರೆಯನ್ನು ನೋಡಿ ಮನಸ್ಸು ಸ್ವಲ್ಪ ತಣ್ಣಗಾಯಿತು. ಆದರಲ್ಲಿ ಒಂದಾದರೂ ಅಲೆಯಿದ್ದಿಲ್ಲ. ಆ ಕೆರೆಯ ವಿಷಯವಾಗಿ ನಾವು ನಾನಾ ಪ್ರಕಾರದ ಕತೆ ಕೇಳಿದ್ದೆವು. ಅದರ ಮಧ್ಯದಲ್ಲಿ ಒಂದು ಬಾವಿಯಿದೆ. ಬಹಳ ಆಳ ನಾಲ್ಕೈದು ಮಡುಗಳಿವೆ—ಎಂತ. ಆದರಲ್ಲಿ ಜಾಣ ಈಜುಗಾರರ ಹೊರತು ಬೇರೆ ಯಾರೂ ಈಜುವ ಪ್ರಯಾಸ ಮಾಡಬಾರದು ಎಂದು ಕಟ್ಟಾಜ್ಞೆ ಇದೆ. ಈ ಕೆರೆಯ ಆಕಾರ ಬಹಳ ವಿಚಿತ್ರ. ಬಹಳ ಉದ್ದ; ಅದರ ಸುತ್ತಳತೆ ಸುಮಾರು ಒಂದು ಫರ್ಲಾಂಗು ಇರಬಹುದು. ಕೆರೆಯ ಎರಡು ದಂಡೆಗಳಲ್ಲಿ ಮರಗಳು ಮತ್ತು ಪೊದರುಗಳು ದಟ್ಟವಾಗಿ ಬೆಳೆದಿವೆ. ಒಂದು ಕಡೆಯಿಂದ ಇನ್ನೊಂದು ಕಡೆಯ ಸಮಾಪ್ತಿ ಕಾಣುವುದಿಲ್ಲ. ಕೆರೆಯನ್ನು ನೋಡಿದ ಕೂಡಲೇ ಸ್ನಾನ ಮಾಡಬೇಕೆಂಬ ಬಲವತ್ತಾದ ಆಶೆ ನನಗಾಯಿತು. ಆದರೆ ನನ್ನ ಹತ್ತಿರ ಈಜುವ ಪೋಷಾಕು ಇದ್ದಿಲ್ಲ. ಹಾಗೆಯೇ ಕೆರೆಯನ್ನು ನೋಡುತ್ತಾ ನಿಂತೆ. ಅಷ್ಟರಲ್ಲಿಯೇ ಕೆರೆಯ ಇನ್ನೊಂದು ಕಡೆಯಲ್ಲಿ ಏನೋ ಬುಳಬುಳ ಎಂದು ಶಬ್ದವಾಯಿತು. ಸ್ವಲ್ಪ ಸತರ್ಕನಾದೆನು. ಯಾರೋ ಈಜುತ್ತಿರಬಹುದೆಂದು ಸುಮ್ಮನಾದೆನು. ಅದೇ ಶಬ್ದ ಮತ್ತೊಮ್ಮೆ ಆಯಿತು. 'ಯಾರಿರಬಹುದು ನೋಡೋಣ' ಎಂದು ಆ ಶಬ್ದ ಬರುವ ಕಡೆ ನಡೆದೆನು. ಒಬ್ಬನು ಆ ಕಡೆ ಮುಳುಗುತ್ತಿದ್ದನು. ಬೇಗನೆ ಪಾಕನ್ನು ಬಟ್ಟೆಗಳನ್ನು ಕಳಚಿ, ನೀರಲ್ಲಿ ಧುಮುಕಿದೆನು. ನಾನು ಚೆನ್ನಾಗಿ ಈಜಬಲ್ಲೆ. ಪಾಪ, ಆ ಮನುಷ್ಯನನ್ನು ಬದುಕಿಸಬೇಕೆಂಬ ಕನಿಕರ ನನಗೆ. ಒಂದೆರಡು ನಿಮಿಷದಲ್ಲಿ ಅವನ ಹತ್ತಿರ

ತಲುಪಿದೆ. ಅವನ ಕೋಟಿನ ಕಾಲರನ್ನು ಹಿಡಿದು ಎಳೆದೆ. ಆ ಮನುಷ್ಯ ನನ್ನ ಹಿಡಿತದಿಂದ ತಪ್ಪಿಸಿಕೊಂಡು ದೂರ ಸರಿದ. ನನಗೆ ಬಹಳ ಆಶ್ಚರ್ಯ ವಾಯಿತು. ಅವನು ಕೋಟು ಶರಾಯಿ ಮತ್ತು ಎರಡು ಮಣ ತೂಕದ ಬೂಟ್ಸುಗಳನ್ನು ಧರಿಸಿಕೊಂಡಿದ್ದನು. ನಮ್ಮಿಬ್ಬರಲ್ಲಿ ಒಂದು ಚಿಕ್ಕ ಕಾಳ ಗವೇ ಆಯಿತು. ಕೊನೆಗೆ ಅವನು ಮೂರ್ಛೆ ಹೋದನು. ಅವನನ್ನು ದಂಡೆಗೆ ಎಳೆಯುವುದರಲ್ಲಿ ನನಗೆ ಹೆಚ್ಚೇನೂ ಕಷ್ಟವಾಗಲಿಲ್ಲ. ನಾನು ದಂಡೆಗೆ ತಲುಪಿದಾಗ, ಅಲ್ಲಿ ಇಬ್ಬರು ಪೋಲಿಸಿನವರು ನಿಂತಿದ್ದರು. ಆ ಮನುಷ್ಯ ನನ್ನು ಬದುಕಿಸಿದುದಕ್ಕಾಗಿ ಅವರು ನನಗೆ ವಂದನೆಯನ್ನಿತ್ತರು. ಎಡನಾ ಇದನ್ನೆಲ್ಲಾ ಕೇಳಿ ಎಷ್ಟು ಸಂತೋಷಪಡಬಹುದೆಂದು, ನನ್ನ ಹೃದಯವು ಹೆಮ್ಮೆಯಿಂದ ಬಿರಿಯುವಂತಾಯಿತು. ಸ್ವಲ್ಪ ಹೊತ್ತಾದ ಮೇಲೆ ಆತನಿಗೆ ಎಚ್ಚರವಾಯಿತು. ಕಣ್ಣು ತೆರೆದು ನೋಡಿದ. ಪೋಲಿಸಿನವರನ್ನು ನೋಡಿದ ಕೂಡಲೇ ಅವನ ಮೋರೆಯು ಜೋಲುಬಿತ್ತು. ಆ ಕೆರೆಯ ಹತ್ತಿರ ಬರಲು ಕಾರಣವೇನೆಂದು ನಾನು ಪೋಲಿಸಿನವರನ್ನು ಕೇಳಿದೆನು. ಅದಕ್ಕೆ ಅವರು ಹೇಳಿದರು: "ಮಹಾಸ್ವಾಮಿ, ಈತ ಮಗ್ಗುಲಿನ ಪಟ್ಟಣದ ನಿವಾಸಿ. ಇವನಿಗೆ ಮಾಡಲು ಕೆಲಸವಿಲ್ಲದೆ ಈಗ ಸುಮಾರು ಏಳು ವರುಷ ಗಳಾದವು. ಈತ ಕೆಲಸ ಹುಡುಕುವ ನೆಪದಲ್ಲಿ ಮನೆ ಬಿಟ್ಟು ಈಗ ಒಂದು ವಾರವಾಯಿತು. ಇಲ್ಲಿ ಈ ಕೆಲಸಕ್ಕೆ ತೊಡಗಿದ್ದಾನೆ." ಆತ ನಮ್ಮ ಹಳ್ಳಿಯವನಲ್ಲವೆಂದು ನಾನು ಮೊದಲೇ ಗ್ರಹಿಸಿದ್ದೆನು. ಅವನ ಪ್ರಾಯ ೩೦–೩೫ ವರುಷ ಇರಬಹುದು. ಅವನ ಹಣೆಯ ಮೇಲೆ ಇದ್ದ ಗೆರೆಗಳು, ಅವನು ಬೇಕಾರಿಯಲ್ಲಿ (Unemployment) ಕಷ್ಟಪಟ್ಟಿದ್ದನ್ನು ಸೂಚಿ ಸುವಂತಿದ್ದವು. ಪೋಲಿಸಿನವರು ಅವನನ್ನು ಕರೆದುಕೊಂಡು ಹೋದರು.

ಹೋಗುವುದಕ್ಕಿಂತ ಮುನ್ನ ಅವನು ನನ್ನ ಕಡೆ ಒಮ್ಮೆ ನೋಡಿದ. ಆ ದೃಷ್ಟಿ ಎಂತಹದು! ಆ ದೃಷ್ಟಿಯಲ್ಲಿ ಕ್ರೋಧ, ದ್ವೇಷ, ಚಿಂತೆ ಮತ್ತು ನಿರಾಶೆ ತುಂಬಿದ್ದವು. ನನ್ನೆದೆಗೆ ಬರ್ಚಿ ತಿವಿದಂತಾಯಿತು. ಅವನ ದೃಷ್ಟಿಯನ್ನು ಎದುರಿಸುವ ಸಾಮರ್ಥ್ಯ ನನ್ನಲ್ಲಿ ಇಂಗಿಹೋಗಿತ್ತು. ಅವರು ಹೋದಮೇಲೆ ನನ್ನ ಮನಸ್ಸು ಬಹಳ ಅಸಮಾಧಾನಗೊಂಡಿತು. "ಚಿಂತೆ ಪಡಬೇಡ. ಒಬ್ಬ ಮನುಷ್ಯನ ಪ್ರಾಣ ಉಳಿಸುವುದು ಬಹಳ

ದೊಡ್ಡ ಕೆಲಸ. ನೀನು ಹಳ್ಳಿಯವರ ಮೆಚ್ಚುಗೆಗೆ ಪಾತ್ರನಾಗುವೆ" ಎಂದು ನನ್ನ ವಿವೇಕವು ನನ್ನನ್ನು ಸಮಾಧಾನಪಡಿಸಿತು. ಆದರೆ ನನ್ನ ಹೃದಯ ಉತ್ತರ ಕೊಟ್ಟಿತು— "ಆದರೆ ಅದರಿಂದೇನು? ಆತನಿಗೇನು ಉಪಕಾರವಾಯಿತು? ಆತ್ಮಹತ್ಯೆಯ ಪ್ರಯತ್ನಕ್ಕಾಗಿ ಅವನನ್ನು ಶಿಕ್ಷಿಸುವರು. ಅವನು ಮೊದಲೇ ನಿರುದ್ಯೋಗಿ; ಇನ್ನು ಮುಂದಕ್ಕೆ ಅವನಿಗೆ ನೌಕರಿ ಸಿಕ್ಕುವ ಸಂದರ್ಭ ಬಂದರೂ ಈಗಿನ ಘಟನೆಯಿಂದ ಅವನ ಕೆಲಸಕ್ಕೆ ಸೊನ್ನೆ ಬೀಳಬಹುದು, ಅಸ್ಥಿರಬುದ್ಧಿಯ ಮನುಷ್ಯ ಎಂದು.' ನಾನು ತುಂಬಾ ಗಾಬರಿಗೊಂಡೆ. ಮನೆಯ ಕಡೆ ಬೇಗಬೇಗನೆ ನಡೆಯಲಾರಂಭಿಸಿದೆ.

ಮನೆಯ ಮುಂದೆ ಹಳ್ಳಿಯ ಮುಕ್ಕಾಲುಪಾಲು ಜನಸಂಖ್ಯೆ ನೆರೆದಿತ್ತು. ನನ್ನ ಹೃದಯವು ಟಾಳುಗೊಂಡಿತು. ನಾನು ಹೇಡಿ ಆದುದರಿಂದ ಕೇಳಲು ನಾಲಿಗೆ ಬಾರದು. ಯಾವುದೋ ಅಶುಭ ಚಿಂತೆಯಿಂದ ಮನಸ್ಸು ನಡುಗಿತು. ಅಲ್ಲಿ ನೆರೆದವರ ದೃಷ್ಟಿಯನ್ನು ಎದುರಿಸಲು ಕಣ್ಣುಗಳು ಏಳಲೊಲ್ಲವು. ಹಾಗೂ ಹೀಗೂ ಮನೆಯನ್ನು ಹೊಕ್ಕೆನು. ಅಲ್ಲಿ ನೋಡುವುದೇನು? ನನ್ನ ಮಗು—ನನ್ನ ಐರಿಸಿನ ಕಳೇಬರ! ನನ್ನ ಬುದ್ಧಿ ಮಂಕಾಯಿತು, ಕಣ್ಣುಗಳು ಮಬ್ಬಾದವು. ಹುಚ್ಚನ ಹಾಗೆ ನನ್ನ ಕಣ್ಮಣಿಯ ಹತ್ತಿರ ಕೂತೆನು. ಎಷ್ಟು ಹೊತ್ತು ಹೀಗೆ ಇದ್ದೆನೋ!

ತಿಳಿಯಿತು ನನಗೆ. ವಿಕಟ ಸತ್ಯ ಹೊರಬಿತ್ತು. ನನ್ನ ಮಗುವಿಗೆ ಅವಳ ತಂದೆ ಸ್ವಂತ ಕೈಗಳಲ್ಲಿ ಮೀನುಗಳಿಗಾಗಿ ತೋಡಿದ್ದ ಹೊಂಡ (fish pond) ಸಾವು ಆಯಿತು. ನಾನು ಹೇಗೆ ನನ್ನನ್ನು ಕ್ಷಮಿಸಲಿ? ನಾನು ಇನ್ನೊಬ್ಬನನ್ನು ಇನ್ನೊಬ್ಬರ ಕೆರೆಯಲ್ಲಿ ಬದುಕಿಸಿದೆನು. ಈಗ ತನ್ನನ್ನು ಬದುಕಿಸಿದ್ದಕ್ಕಾಗಿ ಅವನು ನನ್ನನ್ನು ದ್ವೇಷಿಸುತ್ತಿದ್ದಾನೆ. ಅದೇ ಸಮಯದಲ್ಲಿ ನನ್ನ ಮಗು, ನಾನು ತೋಡಿದ್ದ ಹೊಂಡದಲ್ಲಿ ತನ್ನ ಪ್ರಾಣರಕ್ಷಣೆಗಾಗಿ ಒದ್ದಾಡುತ್ತಿದ್ದಿತು. ಎಂತಹ ದೊಡ್ಡ ಹುಚ್ಚು. ನಾನು ಒಮ್ಮೆಲೆ ಗಹಗಹಿಸಿ ನಕ್ಕೆನು. ಜನರು ನನ್ನ ತಲೆ ತಿರುಗಿಹೋಗಿದೆ ಎಂದು, ನನ್ನನ್ನು ಬೇರೆಕಡೆ ಕರೆದುಕೊಂಡು ಹೋದರು.

ಆ ಮನುಷ್ಯನ ಶಾಪ ನನ್ನ ಮಗುವಿನ ಮೇಲೆ ಬಿತ್ತು. ನಾನು ಅವನನ್ನು ಒದುಕಿಸಬಾರದಿತ್ತು. ನಾನು ಆ ಕೆರೆಯ ಹತ್ತಿರ–ಬಹಳ ಹತ್ತಿರ ನಿಂತುಕೊಳ್ಳಬಾರದಿತ್ತು. ನಾನು ಮೀನುಗಳಿಗಾಗಿ ಆ ಗುಂಡಿ ತೋಡಬಾರದಿತ್ತು. ನಾನು ಮದುವೆಯಾಗಬಾರದಿತ್ತು. ನನಗೆ ಮಗು ವಾಗಬಾರದಿತ್ತು. ನಾನು ಹುಟ್ಟಬಾರದಿತ್ತು. ಎಲ್ಲ ಹುಚ್ಚು!

# ತ್ಯಾಗ

ಸರಳೆಯು ಸರಳ ಹೃದಯಕ್ಕೆ ಜೀವದ ಗೆಳತಿ ಬೇಕಿತ್ತು. ಎದಿರು ಮನೆಯ ಬಾಗಿಲು ತೆರೆದಾಗ ಅದಕ್ಕೆ ಒಳ್ಳೆಯ ಆಸರ ಸಿಕ್ಕಿತು. . .ಸರಳೆ ಪರೀಕ್ಷೆಗೆ ಕೂಡ ಕೂಡಲಿಲ್ಲ. ಅದು ಅವಳ ತಂದೆತಾಯಿಗಳಿಗೂ ಅದು ತಿಳಿಯದು. ಆದರೆ ಅದರಿಂದಲೇ ಅವಳು ಅರಮನೆಯ ವಿದ್ಯುದ್ದೀಪಗಳ ಬೆಳಕಿನಂತೆ ಮೈಸೂರಿನಲ್ಲೆಲ್ಲೂ ಬೆಳಗಿದಳು.

ಕತೆಗಾರ್ತಿ

# ಶ್ರೀಮತಿ ಎಸ್. ಆರ್. ಜಯಲಕ್ಷ್ಮಿ

ಇವರು ಮೈಸೂರಿನ ಸಿಟಿ ಮ್ಯಾಜಿಸ್ಟ್ರೇಟರಾದ ಶ್ರೀ. ಕೆ. ಶ್ರೀನಿವಾಸನ್ ಅವರ ಧರ್ಮಪತ್ನಿ. ಕನ್ನಡದಲ್ಲಿಯೂ ತಮಿಳಿನಲ್ಲಿಯೂ ೧೯೩೭ನೆಯ ಇಸ್ವಿಯಿಂದ ಲೇಖನಗಳನ್ನು ಒರೆಯುತ್ತಲಿದ್ದಾರೆ. ಇವರ ಕನ್ನಡ ಲೇಖನಗಳು 'ರಂಗಭೂಮಿ' 'ಸರಸ್ವತಿ' ಮುಂತಾದವುಗಳಲ್ಲಿಯೂ ತಮಿಳು ಲೇಖನಗಳು 'ಚಿಂತಾಮಣಿ' 'ಗೃಹಲಕ್ಷ್ಮಿ' ಮುಂತಾದವುಗಳಲ್ಲಿಯೂ ಪ್ರಕಟವಾಗಿವೆ. ಮೈಸೂರಿನ 'ರೆಡ್ ಕ್ರಾಸ ಸೊಸೈಟಿ' ಯವರು ಇವರು ಶಿಶುಸಂರಕ್ಷಣದ ವಿಷಯವಾಗಿ ಒರೆದ "ಸುಶೀಲೆ" ಎಂಬ ಕಥೆಯನ್ನೂ, 'ಡೆವಲಪ್‌ಮೆಂಟ ಸೆಕ್ರೆಟರಿಯೇಟಿ' ನವರು ಗ್ರಾಮಾಭಿವೃದ್ಧಿಯ ವಿಷಯವಾಗಿ ಒರೆದ "ರಾಮಚಂದ್ರ" ಎಂಬ ಕಥೆಯನ್ನೂ ಪ್ರಕಟಿಸಿದ್ದಾರೆ. ಇವರು ಕನ್ನಡ ತಮಿಳುಗಳಲ್ಲಿ ಅಲ್ಲದೇ ಹಿಂದಿಯಲ್ಲಿಯೂ ಕೆಲವು ಲೇಖನಗಳನ್ನು ಬರೆದಿದ್ದಾರೆ.

ಇವರ ಶೈಲಿಯ ರೀತಿಯೇ ಬೇರೆ. ಯಾವ ವಿಷಯವನ್ನೂ ಸ್ಪಷ್ಟಗೊಳಿಸಲು ಶಬ್ದಗಳನ್ನು ಒಳಸುವುದರಲ್ಲಿ ಇವರು ನಿಪುಣರಲ್ಲ. ಕತೆಗಳಲ್ಲಿ ಕಾದಂಬರಿಯಲ್ಲಿಯಂತೆ ವರ್ಣನೆಗಳು ಹೆಚ್ಚು. ಸ್ತ್ರೀಯರಲ್ಲಿಯೂ ಉಚ್ಚ–ಆದರ್ಶಗುಣಗಳು ಉಂಟೆಂಬುದನ್ನು ಚಿತ್ರಿಸುವ ಯತ್ನವಿದೆ ಈ ಕತೆಯಲ್ಲಿ.

೧

ಭಾದ್ರಪದ ಮಾಸದ ಮಳೆ; ಆದರಲ್ಲೂ ಸಂಜೆಯ ಮಳೆ. ಎಡೆ ಬಿಡದೆ ಸುರಿಯುತ್ತಲಿದೆ. ಆಕಾಶವು ತೂತಾಗಿ ಬಿಟ್ಟಿದೆಯೋ ಎಂದು ಜನರನ್ನು ಭೀತಿಗೊಳಿಸುತ್ತಲಿತ್ತು. ಕಟ್ಟಕಡೆಗೆ ವರುಣದೇವನು ಬಹಳ ಆಯಾಸ ಹೊಂದಿದವನಾಗಿ ತನ್ನ ಕೆಲಸವನ್ನು ನಿಲ್ಲಿಸಿದನು. ಮೈಸೂರಿನ ರಸ್ತೆಯಲ್ಲಿ ಜನರ ಓಡಾಟವೇ ಇಲ್ಲ. ಮಳೆಯು ನಿಂತ ಸ್ವಲ್ಪಹೊತ್ತಿಗೆ ಒಂದೆರಡು ಮೋಟಾರು ಗಾಡಿಗಳೋ ಅಥವಾ ಟಾಂಗಾ ಗಾಡಿಗಳೋ, ಒಬ್ಬಿಬ್ಬರು ಮನುಷ್ಯರೋ ಮಾತ್ರವೇ ಅಲ್ಲಲ್ಲಿ ಓಡಾಡತೊಡಗಿದರು.

೧೮ ಗವಲ್ಲಿ

ಆಗ ಮೈಸೂರು ಡಿಸ್ಟ್ರಿಕ್ಟ ಜಡ್ಜರಾದ ಭಾಸ್ಕರರಾಯರ ಧರ್ಮಪತ್ನಿಯಾದ ರತ್ನಾಬಾಯಿಯವರು ಚಾಮರಾಜಪುರದ ಎಕ್ಸ್‌-ಟೆನ್‌ಷನ್ನಿನಲ್ಲಿರುವ ತಮ್ಮ ಬಂಗಲೆಯ ಡ್ರಾಯಿಂಗ್‌ಹಾಲಿನಲ್ಲಿ ಒಂದು ಕುರ್ಚಿಯಲ್ಲಿ ಕುಳಿತುಕೊಂಡು, 'ತಾಯಿನಾಡು' ವರ್ತಮಾನಪತ್ರಿಕೆಯನ್ನು ಓದುತ್ತಲಿದ್ದರು. ಹಜಾರದ ಮುಂಭಾಗದ ಕಿಟಕಿಯ ಹತ್ತಿರದಲ್ಲಿ ಹಾಕಿರುವ ಕುರ್ಚಿಯಲ್ಲಿ ಅವಳ ಏಕಮಾತ್ರ ಪುತ್ರಿಯಾದ-ಅಂದು ಅರಳಿದ ಗುಲಾಬಿಹೂವಿನಂತಹ ಸುಂದರವದನದ ಸರಳೆಯು, ಒಂದು ಕ್ರೋಷಾ ಚೌಕವನ್ನು ಹಾಕುತ್ತಾ ಕುಳಿತಿದ್ದಳು. ಆ ತರುಣಿಯ ದೃಷ್ಟಿಯು ಮಾತ್ರ ಕಿಟಕಿಯ ಮೂಲಕ ಅವರ ಮನೆಯ ಮುಂಭಾಗದಲ್ಲಿರುವ ಚಿಕ್ಕ ಮನೆಯೊಂದನ್ನು ಗಮನಿಸುತ್ತಿತ್ತು.

ರತ್ನಾಬಾಯಿಯು 'ತಾಯಿನಾಡ'ನ್ನು ಓದಿ ಮೇಜಿನಮೇಲಿಟ್ಟವಳಾಗಿ ಮತ್ತೊಂದು ಪತ್ರಿಕೆಯನ್ನು ಹುಡುಕುತ್ತಾ "ಸರಳಾ, ಈ ದಿನದ 'ಹಿಂಡೂ' (Hindu) ಪೇಪರ್ ಎಲ್ಲೇ, ಕಾಣಲಿಲ್ಲಾ!" ಎಂದು ಕೇಳಿದಳು. ಆದರೆ ಸರಳೆಯು ತನ್ನ ಪ್ರಶ್ನೆಗೆ ಉತ್ತರ ಕೊಡದೆ, ಕಿಟಕಿಯಿಂದಾಚೆ ಏನನ್ನೋ ಬಹಳ ಗಮನವಾಗಿ ನೋಡುತ್ತಿರುವುದನ್ನು ಕಂಡು ರತ್ನಾಬಾಯಿಯು "ಲೇ, ಸರಳಾ ಅದೇನನ್ನು ಅಷ್ಟು ಗಮನವಾಗಿ ನೋಡುತ್ತಿರುವಿಯೇ? ರಸ್ತೆಯಲ್ಲಿ ಸಹಾ ಜನರ ಓಡಾಟವೇನೂ ಕಾಣಲಿಲ್ಲವಲ್ಲಾ?" ಎಂದಳು.

ಸರಳಾ "ಅಮ್ಮಾ, ನಾಲ್ಕು ತಿಂಗಳುಗಳಿಂದ ಎದಿರು ಮನೆಯು ಬೀಗ ಹಾಕಿತ್ತಲ್ಲಾ; ಅಷ್ಟೊಂದು ಚಿಕ್ಕಮನೆಗೆ ಯಾರೋ ಬಾಡಿಗೆಗೆ ಬಂದಿರುವರೆಂದು ತೋರುತ್ತದೆ. ದೀಪ ಉರಿಯುತ್ತಲಿದೆ. ಮನೆಯಲ್ಲಿ ಮನುಷ್ಯರ ಓಡಾಟವೂ ಕಾಣುತ್ತಲಿದೆ. ಅದನ್ನೇ ಆಗಲಿಂದ ನೋಡುತ್ತಾಲಿದ್ದೇನೆ." ಎಂದು ಹೇಳಿದಳು.

ರತ್ನಾಬಾಯಿಯು ಕುರ್ಚಿಯಿಂದೆದ್ದು ಹೋಗಿ ಮಗಳ ಪಕ್ಕದಲ್ಲಿ ನಿಂತುಕೊಂಡು ಆ ಮನೆಯನ್ನು ಕುತೂಹಲದೊಡನೆ ನೋಡುತ್ತಾ ನುಡಿದಳು: "ಹೌದು, ಯಾರೋ ಬಾಡಿಗೆಗೆ ಬಂದುಬಿಟ್ಟಿರುವಂತೆ

ತೋರುತ್ತದೆ. ಮಧ್ಯಾಹ್ನ ಎರಡು ಎತ್ತಿನ ಗಾಡಿಗಳತುಂಬಾ ಸಾಮಾನುಗಳು ಸಹಾ ಬಂದವಲ್ಲಾ! ಎಷ್ಟು ಜನರು ಓಡಾಡುತ್ತಲಿದ್ದಾರೆ?"

"ಮಳೆಯು ತುಂತುರು ಬೀಳುತ್ತಿರುವುದರಿಂದ ಚೆನ್ನಾಗಿ ಕಾಣುವುದಿಲ್ಲ. ಸುಮಾರು ನನ್ನ ವಯಸ್ಸಿನ ಹುಡಿಗಿಯೊಬ್ಬಳು ತಿರುಗಾಡುತ್ತಲಿದ್ದಾಳೆ. ಅವಳೇ ಆವಾಗಿನಿಂದಲೂ ಸಾಮಾನುಗಳನ್ನು ಸರಿಯಾಗಿಡುತ್ತಲಿದ್ದಾಳೆ. ಅವಳ ಹಿಂದೆಹಿಂದೆ ಒಂದು ಮಗುವು ಸುತ್ತಾಡುತ್ತಲಿದೆ."

"ಅಗೋ ಅಲ್ಲಿ ನೋಡು: ಒಬ್ಬ ಗಂಡಸರು ಆ ಹುಡುಗಿಯ ಸಂಗಡ ಏನನ್ನೋ ಹೇಳಿ ಬಿಟ್ಟು ಪಕ್ಕದ ಕೊಠಡಿಗೆ ಹೋದರು. ನೋಡಿದರೆ ಅವರಿಗೆ ೫೦ ವರ್ಷಗಳು ವಯಸ್ಸಾಗಿರಬಹುದೆಂದು ಕಾಣುತ್ತದೆ, ಅಲ್ಲವೆ ಸರಳಾ? ದೊಡ್ಡ ಹೆಂಗಸರೊಬ್ಬರನ್ನೂ ಕಾಣಲಿಲ್ಲವಲ್ಲಾ"

"ತಾಯಿಲ್ಲದ ತಬ್ಬಲಿ ಹುಡುಗರು ಎಂದು ಕಾಣುತ್ತದೆ, ಪಾಪ"

"ಛೇ, ವಿಷಯವನ್ನು ಸರಿಯಾಗಿ ತಿಳಿದುಕೊಳ್ಳದೆ ಹೀಗೆಲ್ಲಾ ಅನ್ನಬಾರದು ಕಣೇ. ಒಂದು ವೇಳೆ ಆ ಮೇಲೆ ಬರುವುದಾಗಿ ಊರಲ್ಲಿ ನಿಂತಿದ್ದರೂ ನಿಂತಿರಬಹುದು ಅವಳು"

ಮರುದಿನ ಸೋಮವಾರ ಸರಳೆಯು ಎಂದಿನಂತೆ ಊಟ ಮಾಡಿಕೊಂಡು ಕಾಲೇಜಿಗೆ ಹೊರಟಳು. ಸರಳೆಯು ಮೈಸೂರು ಮಹಾರಾಣೀಸ್ ಕಾಲೇಜಿನಲ್ಲಿ ಇಂಟರ್ ಮೀಡಿಯಟ್ ಸೆಕೆಂಡ್ ಇಯರ್ ತರಗತಿಯಲ್ಲಿ ವ್ಯಾಸಂಗ ಮಾಡುತ್ತಲಿದ್ದಳು. ಬಹಳ ಚುರುಕು ಬುದ್ಧಿಯುಳ್ಳವಳೂ ಬಡವರಲ್ಲಿ ದಯಾದಾಕ್ಷಿಣ್ಯವುಳ್ಳವಳೂ ಪರೋಪಕಾರನಿರತಳೂ ಆದ ಸರಳೆಗೆ ಯಾರೇ ಆಗಲಿ ಶೀಘ್ರವಾಗಿ ಸ್ನೇಹವಾಗಿ ಬಿಡುವರು. ಬಹಳ ತಮಾಷೆಯ ಹುಡುಗಿ. ಒಂದು ನಿಮಿಷವೂ ಸಹಾ ಬಾಯಿ ಮುಚ್ಚಿಕೊಂಡಿರಲಾರಳು. ಸರಳೆಯು ಕಾಲೇಜಿಗೆ ಹೋಗುವಾಗ ಇದಿರು ಮನೆಯನ್ನು ಗಮನಿಸುತ್ತಲೇ ನಡೆದಳು.

ಅಂದು ಸಂಜೆ, ರತ್ನಾಬಾಯಿಯು ಅಡಿಗೆಯವನಿಗೆ ಅಡಿಗೆ ಹೇಳುತ್ತಾ ಉಗ್ರಾಣದಲ್ಲಿ ಅಡಿಗೆ ಸಾಮಾನುಗಳನ್ನು ತೆಗೆದುಕೊಡುತ್ತಲಿದ್ದಳು. ಆಗ ಸರಳೆಯು ಕಾಲೇಜಿನಿಂದ ಬಂದವಳು, "ಅಮ್ಮಾ,

ಅಮ್ಮಾ '' ಎಂದು ಕೂಗುತ್ತಾ ಕೈಯಲ್ಲಿ ಪುಸ್ತಕಗಳನ್ನು ಹಿಡಿದಂತೆಯೇ ಉಗ್ರಾಣವನ್ನು ಪ್ರವೇಶಿಸಿದಳು.

ರತ್ನಾಬಾಯಿಯು '' ಏನೇ ಸರಳೇ, ಏನು ವಿಶೇಷ? ಪುಸ್ತಕಗಳನ್ನು ಸಹಾ ಮೇಜಿನ ಮೇಲಿಟ್ಟು ಬರದೆ, ಕೈಕಾಲುಗಳನ್ನೂ ತೊಳೆದುಕೊಳ್ಳದೆ ನೆಟ್ಟಗೆ ಬಂದುಬಿಟ್ಟೆಯಲ್ಲಾ? '' ಎಂದು ಕೇಳಿದಳು.

ಸರಳೆಯು ಮಂದಹಾಸದೊಡನೆ '' ಅಮ್ಮಾ, ಇದಿರು ಮನೆ ಹುಡುಗಿಯೂ ಇಂದು ಕಾಲೇಜಿಗೆ ಬಂದು ಸೇರಿದಳು. ಅವಳು ಬಹಳ ಒಳ್ಳೆಯ ಹುಡುಗಿಯಾಗಿದ್ದಾಳೆ, ಅಮ್ಮಾ. ಅವಳ ಮನೆಯ ವಿಚಾರವೆಲ್ಲವನ್ನೂ ಕೇಳಿ ತಿಳಿದುಕೊಂಡು ಬಂದಿದ್ದೇನೆ. ''

ರತ್ನಾಬಾಯಿಯು ನಸುನಗುತ್ತಾ— '' ಸರಿ, ನೀನೊಂದು ಹರಟೆ ಬುರುಕಿಯಲ್ಲವೇ? ಇಷ್ಟರಲ್ಲಿ ಅವಳನ್ನು ಸ್ನೇಹಮಾಡಿಕೊಂಡುಬಿಟ್ಟೆಯೇನು? ''

ಸರಳೆ— '' ಹೌದು; ಸ್ನೇಹ ಮಾಡಿಕೊಂಡುಬಿಟ್ಟೆನು. ಈಗ ಅವಳು ನನ್ನನ್ನು ತನ್ನ ಮನೆಗೆ ಬರಬೇಕೆಂದು ಹೇಳಿದ್ದಾಳೆ. ನಾನು ಹೋಗಿಬರಲೇನಮ್ಮಾ? ''

ರತ್ನ— '' ಮನೆಯ ಹತ್ತಿರದಲ್ಲಿ ಸ್ನೇಹಿತರಾರೂ ಇಲ್ಲವೆಂದು ಪೇಚಾಡುತ್ತಿದ್ದೆಯಲ್ಲಾ. ಒಬ್ಬಳು ಸಿಕ್ಕಿಬಿಟ್ಟಳು. ಇನ್ನು ಮೇಲೆ, ನಿನಗೇನು ಬಹಳ ಕುಷಿ! ಅವಳ ತಾಯಿಯು ಎಲ್ಲಿರುವಳಂತೆ? ''

ಸರಳೆ— '' ಅವಳ ತಾಯಿಯು ಸತ್ತುಹೋಗಿ, ಮೂರು ವರ್ಷಗಳಾಯಿತಂತೆ, ಆಗ ಒಂದು ವರ್ಷದ ಮಗುವಾಗಿದ್ದ ತಮ್ಮನನ್ನು ತಾನೇ ಸಾಕುತ್ತಿದ್ದಾಳಂತೆ. ''

ರತ್ನ— '' ಅವಳಿಗೆ ಮದುವೆಯಾಗಿದೆಯೇನು? ಅವಳ ಹೇಸರೇನೆಂದು ಹೇಳಲೇ ಇಲ್ಲವಲ್ಲಾ? ಜಾತಿ ಏನಂತೆ? ''

ಸರಳೆ— '' ಮದುವೆಯಾಗಿ, ಎರಡು ವರ್ಷಗಳಿಗೆ ಮುಂಚೆ ವಿಧವೆಯೂ ಆಗಿದ್ದಾಯಿತು ಪಾಪ. ಮಣಿಯೆಂದು ಹೆಸರು; ಸ್ಮಾರ್ತರೆಂದು ಕಾಣುತ್ತದೆ. ನಾನು ಹೋಗಿಬರುತ್ತೇನಮ್ಮಾ. ''

ರತ್ನ— "ಸ್ವಲ್ಪ ತಾಳು. ಮೊದಲು ಪುಸ್ತಕಗಳನ್ನಿಟ್ಟುಬಿಟ್ಟು ಕೈಕಾಲುಗಳನ್ನು ತೊಳೆದುಕೊಂಡು ಬಾ. ಜಡೇಹಾಕಿಕೊಂಡು, ಕಾಫೀ ಕುಡಿದನಂತರ ಹೋಗುವಿಯಂತೆ" ಎಂದು ಹೇಳಿ ಸರಳೆಯನ್ನು ಕಳುಹಿಸಿಬಿಟ್ಟು, ಅಡಿಗೆಯವನನ್ನು ಕುರಿತು "ನಾರಾಯಣಾ, ಬೇಗ ಚಿಕ್ಕಮ್ಮಾವರಿಗೆ ಕಾಫೀನೂವೇ, ಒಂದು ತಟ್ಟೆಯಲ್ಲಿ ಓಂಪುಡೀನೂವೇ ತೆಗೆದುಕೊಂಡು ಬಾ" ಎಂದು ಹೇಳಿ, ತಾನು ಬಾಚಣಿಗೆ, ಎಣ್ಣೆ ಮುಂತಾದ ಸಾಮಗ್ರಿಗಳನ್ನು ತರಲು ಹೋದಳು.

ಮಣಿಯ ತಂದೆಯ ಹೆಸರು ನೀಲಕಂಠಶಾಸ್ತ್ರಿಗಳೆಂಬುದು. ಅವರು ವೆಟೆರಿನರೀಡಾಕ್ಟರು. ಅವರನ್ನು ಬೆಂಗಳೂರಿನಿಂದ ಮೈಸೂರಿಗೆ ವರ್ಗಾಯಿಸಿರುವುದರಿಂದ ತಮ್ಮ ಪುತ್ರಿ ರುಕ್ಮಿಣಿಯನ್ನೂ ಮಗು ಶಂಕರನನ್ನೂ ಕರೆದುಕೊಂಡು ಇಲ್ಲಿಗೆ ಬಂದು, ಈ ಮನೆಯಲ್ಲಿ ವಾಸಿಸತೊಡಗಿದರು. ತಮ್ಮ ಧರ್ಮಪತ್ನಿ ಕಮಲಮ್ಮನು ಮರಣಹೊಂದಿದನಂತರ, ತನ್ನ ಅಳಿಯನೂ ಕಾಲವಾಗಿಹೋಗಲು ಅತಿ ದುಃಖಿತರಾಗಿ ಈ ಎರಡು ಪುತ್ರರತ್ನಗಳೇ ತನ್ನ ಜೀವನೆಂದು ನೆನೆಸುತ್ತಾ ಕಾಲವನ್ನು ಕಳೆಯುತ್ತಲಿದ್ದರು. ರುಕ್ಮಿಣಿಯನ್ನು ಶಾಸ್ತ್ರಿಗಳು "ಮಣಿ" ಎಂಬ ಮುದ್ದು ಹೆಸರಿನಲ್ಲಿ ಕರೆಯುವ ವಾಡಿಕೆ. ಈ ಹೆಸರೇ ಅವಳಿಗೆ ನೆಲೆಯಾಗಿ ನಿಂತುಹೋಯಿತು. ಮಣಿಯು ಬಹಳ ಒಳ್ಳೆಯ ಹುಡುಗಿ. ಮಣಿಗೆ ಮುತ್ತೈದೆಯರ ಕುಂಕುಮದ ಬೊಟ್ಟು ಪ್ರಾಪ್ತಿಯಿಲ್ಲದಿದ್ದರೂ, ಅವಳಿಗೆ ವಿದ್ಯೆಯು ಒಂದು ಕುಂಕುಮದ ಬೊಟ್ಟಾಗಿದ್ದಿತು.

ಮಣಿಯೂ ಸರಳೆಯೂ ಅತಿ ಶೀಘ್ರದಲ್ಲಿಯೇ ಪ್ರಾಣ ಸ್ನೇಹಿತೆಯರಾಗಿಬಿಟ್ಟರು. ಇಬ್ಬರೂ ಒಂದೇ ತರಗತಿಯಲ್ಲಿ ವ್ಯಾಸಂಗಮಾಡುತ್ತಲಿದ್ದರು. ತರಗತಿಯಲ್ಲಿ ಓದುತ್ತಿರುವಾಗಲೂ ಸಹಾ ಮಣಿ ಪ್ರಥಮ ಸ್ಥಾನದಲ್ಲಿಯೂ ಸರಳೆಯು ಎರಡನೇ ಸ್ಥಾನದಲ್ಲಿಯೂ ಇರುತ್ತಲಿದ್ದರು. ಇಬ್ಬರನ್ನೂ ವಿದ್ಯೆಯು ಜೋಡಿಯಂತೆ ಕಟ್ಟಿ, ಅವರ ಮನವನ್ನು ಇನ್ನೂ ಹತ್ತಿರಮಾಡಿತು. ಅವರು ಒಬ್ಬರನ್ನೊಬ್ಬರು ಅಗಲಿರುವ ಕಾಲದಲ್ಲಿ, ಕನ್ನಡಕವನ್ನು ಧರಿಸುವಅಭ್ಯಾಸವಿರುವವನಿಗೆ ಕನ್ನಡಕವನ್ನು ತೆಗೆದಿಟ್ಟುಬಿಟ್ಟರೆ ಹೇಗಾಗುವುದೋ ಇಬ್ಬರೂ ಅಷ್ಟೊಂದು ಪೇಚಾಡಿಬಿಡುವರು. ಇವರನ್ನು ಕಾಲೇಜ್ ವಿದ್ಯಾರ್ಥಿನಿಯರು "ಅವಳೀ-ಜವಳೀ" ಎಂದೇ

೮೦ ಗ ವ ಲ್ಲಿ

ತಮಾಷೆಗೆ ಕರೆಯುವ ಪದ್ಧತಿ. ಮಣಿಯು ಮನೆಯ ಕೆಲಸ ಕಾರ್ಯಗಳೆಲ್ಲವನ್ನೂ ಗಮನಿಸಿಕೊಂಡು, ಮಗುವಾದ ಶಂಕರನನ್ನೂ ಸಾಕುತ್ತಾ, ಕಾಲೇಜಿನಲ್ಲೂ ಪ್ರಥಮ ಶ್ರೇಣಿಯಲ್ಲಿ ಓದುತ್ತಿರುವುದನ್ನು ಕಂಡು ಎಲ್ಲರೂ ಆಶ್ಚರ್ಯಪಡುತ್ತಲಿದ್ದರು.

. . . . . . .

ಇಬ್ಬರು ಸ್ನೇಹಿತೆಯರೂ ಈಗ ಬಿ. ಎ. ಫೈನಲ್ ಇಯರಿನಲ್ಲಿ ಓದುತ್ತಲಿದ್ದಾರೆ. ಈ ಮಧ್ಯೆ ಇದ್ದಕ್ಕಿದ್ದಂತೆ ನೀಲಕಂಠಶಾಸ್ತ್ರಿಗಳಿಗೆ ವರ್ಗವಾಗಿಬಿಟ್ಟಿತು. ಶಾಸ್ತ್ರಿಗಳು ಮಣಿಯು ಪರೀಕ್ಷೆಗೆ ಹೋಗಿರುವುದರಿಂದ ಪರೀಕ್ಷೆಯನ್ನು ಮುಗಿಸಿಕೊಂಡು ಬರಲೆಂದು, ಮಕ್ಕಳಿಬ್ಬರನ್ನೂ ಮೈಸೂರಿನಲ್ಲೇ ಬಿಟ್ಟುಬಿಟ್ಟು, ತಾವುಮಾತ್ರ ಸಾಗರಕ್ಕೆ ಪ್ರಯಾಣ ಮಾಡಿದರು. ಮಣಿಯ ಜೊತೆಗೆ ಮಣಿಯು ಚಿಕ್ಕಮಗುವಾಗಿರುವಾಗಿನಿಂದ ಅವರ ಮನೆಯಲ್ಲಿ ಕೆಲಸಮಾಡುತ್ತಿರುವ ಮುದಿ ಹೆಂಗಸು ಲಕ್ಷ್ಮಮ್ಮನೂ, ಸುಬ್ಬರಾಜು ಎಂಬ ಒಬ್ಬ ಸೇವಕನೂ ಮೈಸೂರಿನಲ್ಲೇ ನಿಂತರು.

೨

ಮಹಾರಾಣೀಸ್ ಕಾಲೇಜಿನ ಫೈನಲ್ ಇಯರ್ ಬಿ. ಎ. ತರಗತಿಯಲ್ಲಿ ಉಪಾಧ್ಯಾಯಿನಿಯು ಇನ್ನೂ ಬರಲಿಲ್ಲವಾದುದರಿಂದ, ವಿದ್ಯಾರ್ಥಿನಿಯರು ಕೆಲವರು ಹರಟುತ್ತಲೂ ಕೆಲವರು ಪಾಠದ ವಿಷಯವಾಗಿ ಮಾತನಾಡುತ್ತಲೂ ಕೆಲವರು ಬೋರ್ಡಿನ ಮೇಲೆ ಚಿತ್ರ ಬರೆದು, ಬರೆದು ಅಳಿಸುತ್ತಲೂ ಗಲಾಟೆ ಮಾಡುತ್ತಲಿದ್ದರು. ಆಗ ಉಪಾಧ್ಯಾಯನಿಯವರು ಬರುವ ಕಾಲುಜೋಡಿನ ಶಬ್ದವು ಕೇಳಬರಲು, ತಕ್ಷಣ ವಿದ್ಯಾರ್ಥಿನಿಯರೆಲ್ಲರೂ ಗಾಂಭೀರ್ಯವಾಗಿ ತಮ್ಮ ತಮ್ಮ ಸ್ಥಳಗಳಲ್ಲಿ ಬಂದು ನಿಂತುಕೊಂಡು, ಅವರಿಗೆ ವಂದನೆಯನ್ನು ಮಾಡಿದರು. ಅವರೂ ವಿದ್ಯಾರ್ಥಿನಿಯರಿಗೆ ಪ್ರತಿವಂದನೆಯನ್ನು ಮಾಡಿ, ಮೇಜಿನ ಪಕ್ಕದಲ್ಲಿ ಬಂದು ನಿಂತುಕೊಂಡು,

"ವಿದ್ಯಾರ್ಥಿನಿಯರೇ, ಇಂದು ಒಂದು ಅಪೂರ್ವ ಸಂಗತಿಯನ್ನು ನಿಮಗೆಲ್ಲರಿಗೂ ತಿಳಿಸಲು ನನಗೆ ಬಹಳ ಸಂತೋಷ ಉಂಟಾಗುತ್ತದೆ

ಎರಡು ತಿಂಗಳಿಗೆ ಮುಂಚೆ ನಮ್ಮ ಕಾಲೇಜಿನ ಅಸಿಸ್ಟೆಂಟ್ ಪ್ರೊಫೆಸರ ಪದಾಸ ಮಿಸ್ ಶೈಲಮಣಿ ಪೊನ್ನಯ್ಯನವರು ಹೆಚ್ಚು ವ್ಯಾಸಂಗ ಮಾಡಲು ವಿಲಾಯತಿಗೆ ತೆರಳಿದರಲ್ಲವೇ ? ಅವರ ಜಾಗವು ಇನ್ನೂ ಖಾಲಿ ಯಾಗಿಯೇ ಇರುವುದರಿಂದ, ಅವರ ಕೆಲಸವನ್ನೂ ನಾನೇ ನೋಡಿಕೊಳ್ಳ ಬೇಕಾಗಿದೆ. ಈ ಸಾರಿ ಬಿ. ಎ. ಪರೀಕ್ಷೆಯಲ್ಲಿ ಪ್ರಥಮಸ್ಥಾನದಲ್ಲಿ ತೇರ್ಗಡೆ ಹೊಂದುವವರನ್ನು ಈ ಕೆಲಸಕ್ಕೆ ತೆಗೆದುಕೊಳ್ಳಬೇಕೆಂದು ಯೋಚಿಸಿರುವೆನು. ಈಸಲವಂತೂ ಮಣಿಯಮ್ಮನು ಖಂಡಿತ ಪರೀಕ್ಷೆ ಯಲ್ಲಿ ಫಸ್ಟ್ ಹೊಡೆದು ಬಿಡುವಳೆಂಬುದು ನನ್ನ ನಂಬಿಕೆ. ಈ ಕೆಲ ಸಕ್ಕೂ ಅವಳು ಅರ್ಹಳಾಗಿರುವಳೆಂದು ನನಗೆ ತೋರುತ್ತದೆ. ಮಣಿ ಎಲ್ಲಿ ಕಾಣಲಿಲ್ಲವಲ್ಲಾ ?. . . .'' ಎಂದರು.

ವಿದ್ಯಾರ್ಥಿನಿಯರೆಲ್ಲರೂ ಒಟ್ಟಿಗೆ '' ಹೌದು, ಮಣಿ ಖಂಡಿತ ವಾಗಿಯೂ ಪ್ರಥಮಸ್ಥಾನದಲ್ಲಿ ತೇರ್ಗಡೆಯಾಗುವಳು. ಅವಳಿಗೆ ಈ ಕೆಲಸವು ಸಿಕ್ಕಿದರೆ ಎಷ್ಟೋ ಸಹಕಾರಿಯಾಗಿರುವುದು '' ಎಂದು ಅನು ಮೋದಿಸಿದರು. ಮಣಿಯು ಅಂದು ಕಾಲೇಜಿಗೆ ಬಾರದಿರುವ ಕಾರಣವು ಒಬ್ಬರಿಗೂ ತಿಳಿಯಲಿಲ್ಲ; ಸರಳೆಯು ಹಿಂದಿನ ದಿವಸ ಮಣಿಯ ಮನೆಗೆ ಹೋಗಿರಲಿಲ್ಲವಾದುದರಿಂದ ಅವಳಿಗೂ ಗೊತ್ತಾಗಲಿಲ್ಲ.

ಆ ದಿನ ಸಾಯಂಕಾಲ, ಕಾಲೇಜು ಬಿಟ್ಟ ತಕ್ಷಣ ಸರಳೆಯು ನೆಟ್ಟಗೆ ಮಣಿಯ ಮನೆಗೆ ಹೋದಳು. ಶಂಕರನಿಗೆ ಹಿಂದಿನ ದಿವಸ ರಾತ್ರಿ ಯಿಂದ ಬಹಳ ಜ್ವರ ಹೊಡೆಯುತ್ತಿರುವುದರಿಂದ ತಾನು ಕಾಲೇಜಿಗೆ ಬರುವುದಕ್ಕಾಗಲಿಲ್ಲವೆಂದು ಮಣಿಯು ತಿಳಿಸಿದಳು. ಸರಳೆಯು ಕಾಲೇಜಿ ನಲ್ಲಿ ಪ್ರೊಫೆಸರ್‌ರವರು ಹೇಳಿದ ವಿಷಯವೆಲ್ಲವನ್ನೂ ಮಣಿಗೆ ತಿಳಿಸಿ, ಸ್ವಲ್ಪ ಹೊತ್ತಿನವರೆಗೆ ಅವಳೊಂದಿಗೆ ಮಾತನಾಡಿಬಿಟ್ಟು ಮನೆಗೆ ಹಿಂತಿರುಗಿದಳು.

ಶಂಕರನಿಗೆ ಜ್ವರ ಬಂದು ಹತ್ತು ದಿವಸಗಳು ಆಯಿತು, ಕ್ರಮೇಣ ಹದಿನೈದು ದಿವಸಗಳೂ ಆಗುತ್ತಾ ಬಂದಿತು. ಆದರೆ ಇನ್ನೂ ಜ್ವರವು ಇಳಿಯುವ ಹಾಗೆ ಕಾಣಲಿಲ್ಲ. ಡಾಕ್ಟರು '' ಇದು ವಿಷಮಶೀತ ಜ್ವರ; ಮಗುವನ್ನು ಆಳುಗಳ ಕೈಯಲ್ಲಿ ಒಪ್ಪಿಸದೆ ತಾವೇ ಬಹು ಎಚ್ಚರಿಕೆ

ಯಿಂದ ಉಪಚರಿಸಿ ನೋಡಿಕೊಳ್ಳಬೇಕು. ಶುಶ್ರೂಷೆಯೇ ಈ ಕಾಯಿಲೆಗೆ ತಕ್ಕ ಔಷಧಿ. ನಿಮ್ಮ ತಂದೆಯವರಿಗೆ ಬಂದು ಹೋಗುವಂತೆ ಒಂದು ಕಾಗದವನ್ನು ಬರೆದು ಹಾಕಿದರೆ ಉಚಿತ'' ಎಂದು ಮಣಿಯೊಡನೆ ಹೇಳಿದರು. ಮಣಿಯು ಹಗಲಿರುಳೂ ಶಂಕರನನ್ನು ಉಪಚರಿಸುತ್ತಾ, ಧೈರ್ಯವನ್ನು ತಂದುಕೊಳ್ಳುತ್ತಾ, ಭಗವಂತನನ್ನು ಪ್ರಾರ್ಥಿಸುತ್ತಾ, ಅವರ ನಡುನಡುವೆ ಸಮಯ ಸಿಕ್ಕಿದಾಗಲೆಲ್ಲಾ ಪರೀಕ್ಷೆಗೂ ಓದಿಕೊಳ್ಳುತ್ತಾ ಇದ್ದಳು. ತನ್ನ ತಂದೆಗೂ ಸಾಗರಕ್ಕೆ ವೈದ್ಯರು ಹೇಳಿದಂತೆ ಒಂದು ಕಾಗದವನ್ನು ಬರೆದು ಹಾಕಿದಳು. ಸಮುದ್ರದಲ್ಲಿ ಬಿದ್ದು ಪರಿತಪಿಸುತ್ತಾ ಇರುವವನಿಗೆ, ಒಂದು ತೇಲಾಡುತ್ತಿರುವ ಮರದ ತುಂಡು ಸಿಕ್ಕಿದಲ್ಲಿ ಧೈರ್ಯವುಂಟಾಗುವಂತೆ, ಸರಳೆಯ ಸಮಾಧಾನ ಮಾತುಗಳಿಂದ ಸ್ವಲ್ಪ ಧೈರ್ಯವನ್ನು ತಾಳಿದವಳಾಗಿ ಮಣಿಯು ಶಂಕರನ ಹಾಸಿಗೆಯ ಪಕ್ಕದಲ್ಲಿ ಕಾಲವನ್ನು ಕಳೆಯುತ್ತಲಿದ್ದಳು.

ದಿನಕರನು ದಿನವೆಲ್ಲಾ ಕೆಲಸಮಾಡಿ ಬಹಳ ಆಯಾಸ ಹೊಂದಿದವನಾಗಿ, ಮನೆಗೆ ಹೋಗಲು, ಆತನ ತಾಯಿಯು ಆತನಿಗೆ ದೃಷ್ಟಿಯನ್ನು ತೆಗೆಯಲು ಆರತಿಯನ್ನು ಸುತ್ತಿ ಓಕಳಿಯನ್ನು ಚೆಲ್ಲಲು, ಅದರ ಸೊಬಗು ಆಕಾಶದಲ್ಲೆಲ್ಲಯೂ ಹಬ್ಬಿರುವುದೋ ಎಂಬಂತೆ ಸೂರ್ಯಾಸ್ತಮಾನವು ಬಹಳ ಮನೋಹರವಾಗಿದ್ದಿತು. ಪಕ್ಷಿಗಳು ದಿನವೆಲ್ಲಾ ಅಲೆದಲೆದು ತಾವು ಶೇಖರಿಸಿದ ಆಹಾರವನ್ನು ತಮ್ಮ ಹೆಂಡತಿ-ಮರಿಗಳಿಗೆ ಕೊಡಲು ಹೋಗುವ ಸಂತೋಷದಿಂದಲೋ ಏನೋ ಎಂಬಂತೆ ''ಕೂಕೂ'' ಎಂದು ಕೂಗಿ ಮಧುರ ಧ್ವನಿಗಳಿಂದ ಗಗನವನ್ನು ತುಂಬುತ್ತಾ, ದಾರಿಯುದ್ದಕ್ಕೂ ತಮ್ಮ ಸಂಗಡಿಗರೊಡನೆ ಆಡುತ್ತಾಡುತ್ತಾ ಹಾರುತ್ತಲಿದ್ದುವು. ನಂದನವನಗಳಲ್ಲಿಯೂ ರಾಜಬೀದಿಗಳಲ್ಲಿಯೂ ತಮ್ಮ ತಮ್ಮ ಮನೆಯ ಮುಂಭಾಗದ ಹೂದೋಟಗಳಲ್ಲಿಯೂ ಉಲ್ಲಾಸವಾಗಿ ತಿರುಗಾಡುತ್ತಲಿರುವ ಸ್ತ್ರೀಪುರುಷರು, ಆಟವಾಡುತ್ತಲಿರುವ ಮಕ್ಕಳೇ ಮುಂತಾದವರ ಮನಸ್ಸನ್ನು, ತಾನು ಪುಷ್ಪವನಗಳಿಂದ ಸೂರೆ ಮಾಡಿಕೊಂಡು ತಂದ ಸುವಾಸನೆಯೊಂದಿಗೆ ಚಲಿತ ಮಂದಮಾರುತವು ಬೀಸಿ ಮತ್ತಷ್ಟು ಉಲ್ಲಾಸಪಡಿಸುತ್ತಲಿದ್ದಿತು.

ಆದರೆ ಇಪ್ಪತ್ತು ದಿವಸಗಳಿಂದಲೂ ಎಡೆಬಿಡದೆ ತಮ್ಮನ ಹಾಸಿಗೆಯ ಪಕ್ಕದಲ್ಲಿಯೇ ಕಾಲಕಳೆಯುತ್ತಲಿರುವ ಮಣಿಗೆ ಈ ಮನೋಹರವಾದ ಸಮಯದಲ್ಲಿ ಉಲ್ಲಾಸವೆಲ್ಲಿಂದ ಉಂಟಾದೀತು? ಆಗ ತಾನೆ ಜ್ವರದ ಮಗುವಿನೊಡನೆ ಪೇಚಾಡಿ ಔಷಧಿ ಕುಡಿಸಿ, ತಟ್ಟಿ ನಿದ್ರೆ ಮಾಡಿಸಿದ ಮಣಿಯು ಮೆತ್ತಗೆದ್ದು ಪಕ್ಕದ ಕೊಠಡಿಗೆ ತೆರಳಿ, ಆಗಲೇ ಅನೇಕ ಸಾರಿ ಓದಿ ಮೇಜಿನಮೇಲಿಟ್ಟಿದ್ದ ಕಾಗದವನ್ನು ತೆಗೆದು ಮತ್ತೊಮ್ಮೆ ಓದಲುಪಕ್ರಮಿಸಿದಳು. ಆದರೆ ಓದಲಾರದೆ ನಿಂತೆಡೆಯಲ್ಲಿಯೇ ಕುಳಿತವಳಾಗಿ, ದುಃಖದ ಉದ್ರೇಕವನ್ನು ತಡೆಯಲಾರದೆ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ಆ ತರುಣಿಯು ನೀರಿನಿಂದ ಹೊರಕ್ಕೆ ಬಂದ ಮೀನಿನಂತೆ ತಳಮಳಿಸಿದಳು. ಸಮುದ್ರದಲ್ಲಿ ಬಿದ್ದು ಪೇಚಾಡುತ್ತಲಿರುವ ಮನುಷ್ಯನು, ಉಳಿದುಕೊಳ್ಳಲು ಏನಾದರೂ ಸಹಾಯವು ಸಿಕ್ಕಲಾರದೇ ಎಂಬ ಕೊನೆಯ ಆಸೆಯಲ್ಲಿ ಅಡಿಗಡಿಗೆ ತನ್ನ ಕೈಗಳೆರಡನ್ನೂ ನೀರಿನ ಮೇಲೆ ವಿಸ್ತರಿಸಿಕೊಂಡು ಅಂಗಲಾಚುವಂತೆ ದುಃಖವೆಂಬ ಸಮುದ್ರದಲ್ಲಿ ತನ್ನ ಮನೋಬಲವೆಂಬ ಕೈಯನ್ನು ವಿಸ್ತರಿಸಿ ತನ್ನ ಸಮಸ್ಯೆಗೇನಾದರೂ ಉಪಾಯ ಸಿಕ್ಕುವುದೇ ಎಂದು ಪುನಃ ಪುನಃ ಹುಡುಕಲಾರಂಭಿಸಿದಳು. ಕಟ್ಟಕಡೆಗೆ ಏನೂ ತೋಚದೆ ನಿರುಪಾಯಳಾಗಿ ಬಿಕ್ಕಿ ಬಿಕ್ಕಿ ಅಳತೊಡಗಿದಳು.

ಆಗ ಮನೆಯ ಹಿಂಬಾಗಿಲನ್ನು ಯಾರೋ ತಟ್ಟುವ ಶಬ್ದ ಕೇಳಲು, ಅಡಿಗೆಯ ಮನೆಯಲ್ಲಿದ್ದ ಲಕ್ಷ್ಮಮ್ಮನು ಹೋಗಿ ಬಾಗಿಲನ್ನು ತೆರೆದಳು. ಹೊರಗಡೆ ನಿಂತಿದ್ದ ಸರಳೆಯು "ಮಗುವಿಗೆ ಜ್ವರವು ಹ್ಯಾಗಿದೆ?" ಎಂದು ವಿಚಾರಿಸುತ್ತಾ ಮಣಿಯ ಕೊಠಡಿಯನ್ನು ಪ್ರವೇಶಿಸಿದಳು. "ಜ್ವರವು ಬಿಟ್ಟೇ ಇಲ್ಲಾಂದ್ರೆ, ಮಣಿಯಮ್ಮನಂತೂ ಸುಮ್ಮನೇ ಅಳುತ್ತಲೇ ಇರುತ್ತಾಳೆ; ನಾನು ಸಮಾಧಾನ ಹೇಳಿದರೆ, ಅವಳೇನು ಕೇಳಲೊಲ್ಲಳು." ಎಂದು ಲಕ್ಷ್ಮಮ್ಮನು ಹೇಳುತ್ತಾ ಅಡಿಗೆಯ ಮನೆಯ ಕಡೆಗೆ ತೆರಳಿದಳು.

ಮಣಿಯು ಅಳುತ್ತಿರುವುದನ್ನು ಕಂಡು ಸರಳೆಗೂ ದುಃಖವು ಉಕ್ಕಿಬರಲು, ಮಣಿಯ ಪಕ್ಕದಲ್ಲಿ ಕುಳಿತು ಅವಳ ತಲೆಯನ್ನು ತನ್ನ

ತೊಡೆಯ ಮೇಲೆ ಪ್ರೀತಿಯಿಂದ ತೆಗೆದಿಟ್ಟುಕೊಂಡು, ಅವಳ ವಿಶಾಲವಾದ ಹಣೆಯಮೇಲೆ ಸುಂದರವಾದ ಅಚ್ಚ ಕಪ್ಪು ಕುರುಳುಗಳು ಹೊರಳಾಡುತ್ತಿರಲು ಅವನ್ನು ಹಿಂದಕ್ಕೆ ತಳ್ಳಿ, ತನ್ನ ಕೈವಸ್ತ್ರದಿಂದ ಅವಳ ಮೃದುವಾದ ಉಬ್ಬುಕೆನ್ನೆಗಳಲ್ಲಿ ಮುತ್ತಿನಂತೆ ಕಣ್ಣೀರು ಹನಿಗಳು ಉದುರುತ್ತಿರುವುದನ್ನು ಒರಸಿದಳು.

ಮಣಿಯು ತನ್ನ ಸ್ನೇಹಿತೆಯನ್ನು ಪರಿತಾಪಕರವಾಗಿ ನೋಡುತ್ತಾ ದೀನಸ್ವರದಲ್ಲಿ– "ಸರಳಾ, ಬಂದೆಯೇನಮ್ಮಾ! ನೀನೇ ನನ್ನ ಜೀವಪ್ರಾಯಳು. ನೀನು ಹೀಗೆ ಕಾಯಿಲೆಯಿರುವ ಮನೆಗೆ ಆಡಿಗಡಿಗೆ ಬಂದರೆ ನಿನ್ನ ತಾಯಿತಂದೆಯರು ಕೋಪಿಸಿಕೊಳ್ಳುವುದಿಲ್ಲವೇ? ಸುಮ್ಮನೆ ಹೀಗೆ ಬರಬಾರದಮ್ಮಾ."

ಸರಳಾ— "ಇನಾಕ್ಯುಲೇಷನ್ ಮಾಡಿಸಿಕೊಂಡುದಾಯಿತಲ್ಲಾ, ಇನ್ನೇನು ಭಯವಂತೆ! ಅದಿರಲಿ, ಶಂಕರನಿಗೆ ಜ್ವರ ಹ್ಯಾಗಿದೆ?"

ಮಣಿ— "ಇನಾಕ್ಯುಲೇಷನ್ ಮಾಡಿಸಿಕೊಂಡರೂ ಈ ರೀತಿ ಸುಮ್ಮನೆ ಬರಬಾರದು. ಇದೊಂದು ಮಹಾ ಕೆಟ್ಟ ಅಂಟುರೋಗವೆಂದು ನಿನಗೆ ಗೊತ್ತಿಲ್ಲವೇ? ಮೊನ್ನೆ ನೀನು ಇಲ್ಲಿಂದ ಹೋಗುತ್ತಲೇ, ನಿಮ್ಮ ತಾಯಿಯು ಬಾಗಿಲಲ್ಲೇ ನಿಂತು ನಿನ್ನನ್ನು ಬೈದದ್ದು ನನಗೆ ಕೇಳಿತು. ನಾಳೆಯಿಂದ ನೀನು ಬಂದರೆ ನಿನ್ನೊಡನೆ ಮಾತನಾಡುವುದೇ ಇಲ್ಲ ನೋಡು."

ಸರಳೆ— "ಅವರಿಗೇನಂತೆ! ಕಾಂತಿಮತಿಯ ಮನೆಗೆ ಹೋಗಿ ಬರುತ್ತೇನೆ ಎಂದು ಅಮ್ಮನ ಹತ್ತಿರ ಹೇಳಿಬಿಟ್ಟು ಹೊತ್ತಗೆ ಹಿಂಬಾಗಿಲಿನಿಂದ ಇಲ್ಲಿಗೆ ಬಂದುಬಿಟ್ಟೆನು. ನಾನು ಕೇಳಿದುದಕ್ಕೆ ಮೊದಲು ಜವಾಬು ಕೊಡೇ."

ಮಣಿ— "ಸ್ವಲ್ಪಹೊತ್ತಿಗೆ ಮುಂಚೆ ತಾನೇ ಟೆಂಪರೇಚರ್ ತೆಗೆದೆ. ೧೦೨·೬ ಡಿಗ್ರಿ ಜ್ವರವಿತ್ತು. ಹೋದ ವಾರವನ್ನು ನೆನಸಿಕೊಂಡರೆ, ಅಬ್ಬಬ್ಬಾ, ಮೈಯೆಲ್ಲಾ ನಡುಗುತ್ತವೆ. ೧೦೫'—೧೦೬' ಕೆಳಗೆ ಜ್ವರವು ಇಳಿಯದೇನೇ ಹೊಡೆಯುತ್ತಿತ್ತಲ್ಲಾ! 'ಇದು ಮೂರನೇ ವಾರ,

ಇನ್ನು ಮೇಲೆ ಭಯವಿಲ್ಲ. ಸರ್‌ಸಿಂಗ್‌ನಲ್ಲಿ ಎಚ್ಚರಿಕೆಯಾಗಿರಬೇಕಷ್ಟೇ' ಎಂದು ಡಾಕ್ಟರ್‌ರವರು ಹೇಳುತ್ತಾರೆ.''

ಸರಳೆ— "ತಂದೆಯವರಿಂದ ಕಾಗದವೇನಾದರೂ ಬಂದಿತೆ?''

ಈ ವಾರ್ತೆಯನ್ನು ಕೇಳಿದೊಡನೆ ಮಣಿಯ ಮುಖವು ಚಿಕ್ಕದಾಯಿತು, ಕಣ್ಣುಗಳಿಂದ ಕಂಬನಿಗಳು ಪುನಃ ಸುರಿಯಲಾರಂಭಿಸಿದುವು. ಗದ್ಗದಸ್ವರದಲ್ಲಿ• "ಹೂಂ, ಬಂದಿತು. ಅವರಿಗೆ ರಜಾ ಕೊಡುವುದಿಲ್ಲವೆಂದುಬಿಟ್ಟರಂತೆ. 'ಇನ್ನು ಪೆನ್‌ಷನಿಗೆ ಎರಡೇ ವರ್ಷಗಳು ಇವೆ. ಈಗ ಮೇಲಧಿಕಾರಿಗಳೊಡನೆ ಜಗಳವಾಡಿಕೊಂಡು ಬಲಾತ್ಕಾರವಾಗಿ ರಜಾ ತೆಗೆದುಕೊಂಡು ಬಂದುಬಿಟ್ಟರೆ ಪೆನ್‌ಷನಿಗೇನೇ ಭಂಗಬಂದೀತೆಂದು ಅಂಜುತ್ತೇನೆ. ನೀನು ಪರೀಕ್ಷೆಗೆ ಹೋಗದಿದ್ದರೆ ಚಿಂತೆಯಿಲ್ಲ. ಮಗುವನ್ನು ಜಾಗ್ರತೆಯಾಗಿ ನೋಡಿಕೊ. ಈ ವರ್ಷವೆಲ್ಲಾ ಕಷ್ಟಪಟ್ಟು ಓದಿದ ಓದೆಲ್ಲಾ ವ್ಯರ್ಥವಾಗುವುದಲ್ಲಾ, ಎಂದು ಕೊರಗುವೆ. ಪಾಪ ಏನುಮಾಡುವುದು? ಭಗವಂತನು ನಮಗೆ ನಾನಾಕಡೆಗಳಲ್ಲಿಯೂ ಕಷ್ಟವನ್ನು ಕೊಟ್ಟು ತಮಾಷೆ ನೋಡುತ್ತಾನೆ. ಅವನ ಲೀಲೆಯು ಹೀಗಿರುವಲ್ಲಿ ನಮ್ಮ ಪ್ರಯತ್ನವೇನಿದೆ, ಹೇಳು?' ಎಂದು ಬಹಳ ವ್ಯಸನಕರವಾಗಿ ಕಾಗದ ಬರೆದಿದ್ದಾರೆ. ನಾನೇನ ಮಾಡಲೀ, ಸರಳಾ?'' ಎಂದು ಅವಳ ತೊಡೆಯಲ್ಲಿ ಮುಖವನ್ನಿಟ್ಟು ಮುಚ್ಚಿಕೊಂಡು ಬಹಳವಾಗಿ ಅತ್ತಳು. ಇಬ್ಬರು ಸಖಿಯರೂ ಈ ತರಹದಲ್ಲಿ ಬಹಳ ಹೊತ್ತಿನವರೆಗೆ ಅತ್ತನಂತರ ಸರಳೆಯು ಚೇತರಿಸಿಕೊಂಡು "ಮಣೀ, ನಾನೊಂದು ಉಪಾಯವನ್ನು ಹೇಳುತ್ತೇನೆ, ಅದರಂತೆ ನಡೆಯುತ್ತೀಯಾ?'' ಎಂದು ಅತಿಪ್ರೀತಿಯಿಂದ ಸಖಿಯನ್ನು ಕುರಿತು ಕೇಳಿದಳು.

ಮಣಿಯು ತನ್ನ ಸಖಿಯನ್ನು ಪ್ರೇಮಪೂರಿತವಾದ ದೃಷ್ಟಿಯಲ್ಲಿ ಆದರೊಡನೆ ಕೃತಜ್ಞತೆಯು ಕಲೆತು ರಂಜಿಸುತ್ತಿರುವ ದೃಷ್ಟಿಯಲ್ಲಿ ನೋಡುತ್ತಾ "ನನ್ನ ಪ್ರಾಣಸ್ನೇಹಿತೇ, ನಿನ್ನ ಮಾತನ್ನು ನಾನು ಯಾವಾಗಲಾದರೂ ಉಲ್ಲಂಘಿಸಿ ನಡೆದಿರುವೆನೇ? ಇದೇನು ಹೀಗೆ ಕೇಳುವೆ? ಅದೇನುಪಾಯ ಹೇಳಮ್ಮಾ?'' ಎಂದು ಬಹಳ ಆತುರದಿಂದ ಕೇಳಿದಳು.

ಸರಳೆಯು ಬಹಳ ಶಾಂತರೀತಿಯಲ್ಲಿ ಗಂಭೀರ ಧ್ವನಿಯಲ್ಲಿ "ನಾನು ಒಂದು ಶಂಕರನನ್ನು ನೋಡಿಕೊಳ್ಳುತ್ತೇನೆ. ನೀನು ಪರೀಕ್ಷೆಗೆ ಹೋಗಿ ಬಾ" ಎಂದು ನುಡಿದಳು.

ತಕ್ಷಣ ಮಣಿಯು ಆಶ್ಚರ್ಯದೊಡನೆಯೂ, ಆನಂದದೊಡನೆಯೂ ಆನಂದ ಭಾಷ್ಪಗಳನ್ನು ಸುರಿಸುತ್ತಾ "ಹಾ, ಸರಳಾ, ನನ್ನ ಪ್ರಿಯಸಖೀ! ಏನು ಹೇಳಿದೆ!" ಎಂದು ನುಡಿದು ಸರಳೆಯನ್ನು ಅತ್ಯಂತ ಕೃತಜ್ಞತೆಯೊಡನೆ ದೃಷ್ಟಿಸಲು, ಸ್ವಲ್ಪಕಾಲದವರೆಗೆ ಆ ನಾಲ್ಕು ಕಣ್ಣುಗಳು ಪ್ರೇಮವೆಂಬ ಕೊಳದಲ್ಲಿ ಮುಳುಗಿ ಸುಖವನ್ನನುಭವಿಸಿದುವು. ಮಣಿಯು ಸರಳೆಯನ್ನು ಪ್ರೀತಿಯಿಂದ ಬಾಚಿ ತಬ್ಬಿಕೊಂಡು ಅವಳ ಮೃದುವಾದ ಕೆನ್ನೆಗಳಲ್ಲಿ ಮುತ್ತಿನ ಮಳೆಯನ್ನು ಸುರಿಸಿದಳು.

ಸರಳೆಯು ಮೃದುವಾದ ನುಡಿಯಲ್ಲಿ "ಮಣಿ, ಇದೇನೇ ಇದು! ನಾನು ಅದೇನಂತಹ ಭಾರೀ ಸಹಾಯವನ್ನು ಮಾಡಿಬಿಡುವೆನು? ಈ ವರ್ಷವಲ್ಲದಿದ್ದರೆ ನಾನು ಬರುವ ವರ್ಷ ಪರೀಕ್ಷೆಗೆ ಹೋಗುತ್ತೇನೆ. ನಾನು ಕೇವಲ ನನ್ನ ಜ್ಞಾನವನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿಯೇ ಓದುತ್ತೇನೆ. ನಿನಗಾದರೋ ಪರೀಕ್ಷೆಗೆ ಹೋಗದಿದ್ದಲ್ಲಿ ಎಷ್ಟೊಂದು ತರಹಗಳಲ್ಲಿ ಕಷ್ಟಗಳು ಸಂಭವಿಸುತ್ತವೆ ನೋಡು. ಕಾಯಿಲೆಯ ಮಗುವನ್ನು ಸಹಾ ನೋಡಿಕೊಂಡು, ಸಂಗಡ ಮನೆಯ ಕೆಲಸ ಕಾರ್ಯಗಳನ್ನೂ ಗಮನಿಸಿಕೊಂಡು, ಹಗಲಿರುಳೂ ನಿದ್ರೆಗೆಟ್ಟು, ದೇಹಶ್ರಮವನ್ನೂ ಲಕ್ಷಿಸದೆ ಓದಿದ ಓದೂ, ನಿನ್ನ ತಂದೆಯು ಬಹಳ ಶ್ರಮಪಟ್ಟು ಓದಲು ಒದಗಿಸಿದ ಹಣವೂ, ನಿಮಗಿರುವ ಹಣಕಷ್ಟದಲ್ಲಿ ಸಧ್ಯ ಕೈಗೆ ಎಟುಕಿರುವ ಉದ್ಯೋಗವೂ ಹಾಗಾಗಿ ಇನ್ನೂ ಎಷ್ಟೋ ತರಹಗಳಲ್ಲಿ ನಿನಗೂ ನಿನ್ನ ಕುಟುಂಬಕ್ಕೂ ನಷ್ಟವುಂಟಾಗುತ್ತದೆ. ಮಣೀ, ನೀನು ಖಂಡಿತವಾಗಿಯೂ ಪರೀಕ್ಷೆಗೆ ಹೋಗಿಯೇ ತೀರಬೇಕು."

ಮಣಿಯು ಆದರದೊಡನೆ ಸರಳೆಯ ಕರಗಳೆರಡನ್ನೂ ಹಿಡಿದು ತನ್ನ ಎರಡು ಕಣ್ಣುಗಳಿಗೂ ಒತ್ತಿಕೊಂಡು, ಅಶ್ರುಜಲದಿಂದ ತೊಳೆಯುತ್ತಾ ಗದ್ಗದ ಸ್ವರದಲ್ಲಿ "ಸರಳಾ, ನಿನ್ನನ್ನು ಎಷ್ಟು ಹೊಗಳಿದರೂ

ಸಾಲದು. ನನ್ನ ತಾಯೀ, ನನ್ನ ಬಂಗಾರಾ, ನಿನ್ನಂತಹ ಸದ್ಗುಣವತಿಯು ಈ ಪ್ರಪಂಚದಲ್ಲಿ ಸಿಗುವ್ರದು ಬಹಳ ಅಪರೂಪ! ನೀನು ಹೇಳಿದ ಈ ಒಂದು ಮಾತಿಗೇನೇ ನನ್ನಿಂದ ನಿನಗೆ ಪ್ರತ್ಯುಪಕಾರ ಮಾಡಲಾಗುವ್ರದೇ!....''

ಸರಳಾ—''ನೀನು ನಾನು ಹೇಳಿದಂತೆ ಕೇಳುವ್ರದೇ ನನಗೆ ಮಹದುಪಕಾರ ಮಾಡಿದಂತಾಗುವ್ರದು.''

ಮಣಿ—''ನಿನ್ನ ತಾಯಿತಂದೆಯರು ಆ ಪೋಲಿ ನನ್ನನ್ನು ಏನನ್ನುವರು, ಸ್ವಲ್ಪ ಆಲೋಚಿಸು, ತಾಯೀ. ಛೀ ಛೀ, ನಾನು ಈ ಮಹಾ ಪಾಪಕ್ಕೆ ಗುರಿಯಾಗಲಾರೆನು. ಅನ್ಯಾಯವಾಗಿ ನಿನ್ನ ಎರಡು ವರ್ಷದ ಪರಿಶ್ರಮವನ್ನು ಮಣ್ಣುಪಾಲು ಮಾಡಲಾರೆನು. ಇದು ನಡೆಯದ ಕೆಲಸ. ಬೇಗಾದರೆ ಪರೀಕ್ಷೆ, ಹೋಗಿ ಓದಿಕೊಳ್ಳಮ್ಮಾ.''

ಸರಳಾ—''ಮಣೀ, ನನ್ನ ಮಾತನ್ನು ಉಲ್ಲಂಘಿಸುವ್ರದೇ ನೀನು ನನಗೆ ಮಾಡುವ ಪ್ರತ್ಯುಪಕಾರವೇನು? ಬೇಡ, ಬೇಡ. ನನ್ನ ಮನಸ್ಸನ್ನು ನೋಯಿಸಬೇಡ. ನಾನು ನನ್ನ ತಾಯಿತಂದೆಯರಿಗೆ ಪರೀಕ್ಷೆಗೆ ಹೋಗಿಬರುವೆನೆಂದು ಹೇಳಿ ಅವರಿಗೆ ತಿಳಿಯದಂತೆ ಇಲ್ಲಿಗೆ ಬಂದು ಬಿಡುವೆನು. ಲಕ್ಷ್ಮಮ್ಮ, ಸುಬ್ಬರಾಜು ಎಲ್ಲರಿಗೂ ಈ ರಹಸ್ಯವನ್ನು ಹೊರಗೆಡಹದಂತೆ ಭದ್ರಪಡಿಸಿಬಿಡುವೆನು. ನೀನು ನಿಶ್ಚಿಂತೆಯಾಗಿ ಪರೀಕ್ಷೆಗೆ ಹೋಗಿಬರುವಿಯಂತೆ. ಆ ಕೊನೆಯಲ್ಲಿರುವ ಕಾಲೇಜಿನಿಂದ ನಿಜಾಂಶವು ಹೊರಬೀಳುವ್ರದರೊಳಗೆ ಪರೀಕ್ಷೆಯು ಮುಗಿದೇ ಹೋಗುವ್ರದು. ಕಾಲೇಜಿನಲ್ಲಿ ವಿಚಾರಿಸಿದವರಿಗೆ ಸರಳೆಗೆ ಜ್ವರವೆಂದೂ, ನನ್ನ ತಂದೆಯು ಕಾಯಿಲೆ ಮಗುವನ್ನು ನೋಡಿಕೊಳ್ಳಲು ಬಂದಿರುವರಾದುದರಿಂದ ನಾನು ಪರೀಕ್ಷೆಗೆ ಬರಲಾಯಿತೆಂದೂ ಹೇಳಿಬಿಡು, ಸರಿ. ನಾನು ನಾಳೇ ಬರುತ್ತೇನೆ'' ಎಂದು ನುಡಿದು, ಮಣಿಯ ಕೆನ್ನೆಯನ್ನು ಚಿಗಟಿಬಿಟ್ಟು, ಅವಳ ಪ್ರತ್ಯುತ್ತರವನ್ನು ನಿರೀಕ್ಷಿಸದೆ ಬಿರಬಿರನೆ ಹೊರಟು ಹೋದಳು. ಮಣಿಯು ಏನೊಂದೂ ತೋಚದವಳಾಗಿ, ದಿಗ್ಭ್ರಮೆಗೊಂಡವಳಾಗಿ, ಕಣ್ಣು ಮೊದಲನೆ ಎವೆಯಿಕ್ಕದೆ ಸರಳೆಯು ಹೋದ ದಾರಿಯನ್ನೇ ದೃಷ್ಟಿಸುತ್ತಾ
ಗ

ಕುಳಿತಲ್ಲಿಯೇ ಕುಳಿತಿದ್ದಳು. ಸರಳೆಯು ಆದರ್ಶಪ್ರಾಯವಾದ ಈ ತ್ಯಾಗವನ್ನು ಪ್ರೀತಿ ಅಭಿಮಾನಗಳೊಡನೆ ಮನದಲ್ಲಿಯೆ ಕೊಂಡಾಡಿದಳು.

ಸರಳೆಯು ಬಂದು ಶಂಕರನನ್ನು ನೋಡಿಕೊಳ್ಳಲು, ಮಣಿಯು ನಡುನಡುಗುತ್ತಾ ಪರೀಕ್ಷೆಗೆ ಹೋಗಿ ಉತ್ತರ ಬರೆದು ಬಂದಳು. ಕಾಲೇಜಿನಲ್ಲಿ ಕೇಳುವವರಿಗೆಲ್ಲಾ ಸರಳೆಯು ಹೇಳಿಕೊಟ್ಟಂತೆಯೇ ಉತ್ತರ ಏತ್ತು ಬರುತ್ತಿದ್ದಳು. ನಂತರ ಸರಳೆಯು ಮಣಿಯ ಪರೀಕ್ಷೆಯ ಪ್ರಶ್ನೆಪತ್ರದೊಡನೆ ಮನೆಗೆ ಬಂದು "ಪರೀಕ್ಷೆಯಲ್ಲಿ ಹ್ಯಾಗೆ ಬರೆದಿರುವೆ?" ಎಂದು ತಾಯಿ-ತಂದೆಯರು ಕೇಳಿದುದಕ್ಕೆ, ಶಾಂತವಾಗಿ ಅವರಿಗೆ ಸ್ವಲ್ಪವೂ ಸಂಶಯ ಹುಟ್ಟದಂತೆ "ಈ ಪ್ರಶ್ನೆಯನ್ನು ಬಿಟ್ಟುಬಿಟ್ಟೆ, ಇದಕ್ಕೆ ಮುಕ್ಕಾಲುಪಾಲು ಉತ್ತರ ಬರೆದಿರುವೆ" ಎಂತೆಲ್ಲಾ ಸರ್ವಸಾಧಾರಣವಾಗಿ ವಿವರಿಸಿ ಜವಾಬು ಹೇಳುತ್ತಿದ್ದಳು. ಪರೀಕ್ಷೆಯು ಮುಗಿದ ಕೊನೆಯ ದಿವಸ ರತ್ನಾಬಾಯಿಯು "ಮೂರು ದಿವಸವಾಗಿ ನಿನ್ನ ಪರೀಕ್ಷೆಯ ಗಲಾಟೆಯಲ್ಲಿ ನನಗೆ ಕ್ಲಬ್ಬಿಗೆ ಹೋಗಲು ಮನಸ್ಸೇ ಬರಲಿಲ್ಲ. ಇಂದು ನಿರ್ವಿಚಾರವಾಗಿ ಕ್ಲಬ್ಬಿಗೆ ಹೋಗಿಬರಲೇ? ನೀನೂ ನನ್ನ ಸಂಗಡ ಬರುವೆಯಾ, ಸರಳಾ?" ಎಂದು ತನ್ನ ಪುತ್ರಿಯನ್ನು ಕೇಳಿದಳು.

ಸರಳೆಗೆ ತಕ್ಷಣ ಮೈ ಜುಂ ಎಂದಿತು. ಏಕೆಂದರೆ, ಮೂರು ದಿನಗಳಾಗಿ ಪರೀಕ್ಷೆಯ ಗಲಾಟೆಯಲ್ಲಿ ಲೇಡಿಸ್ ಕ್ಲಬ್ಬಿಗೆ ಹೋಗಲಾರದೆ, ಈ ದಿನ ಖಂಡಿತವಾಗಿಯೂ ತನ್ನ ಕಾಲೇಜ್ ಪ್ರಿನ್ಸಿಪಾಲರೂ, ಪ್ರೊಫೆಸರುಗಳೂ ಕ್ಲಬ್ಬಿಗೆ ಬರುವರು. ಆಗ ತನ್ನ ಗುಟ್ಟು ರಟ್ಟಾಗಿಬಿಡುವುದಲ್ಲಾ ಎಂದು ಸರಳೆಯು ಗಾಬರಿಗೊಂಡಳು. ಆದರೆ ಆ ಸರಳಬಾಲೆಯು ಧೈರ್ಯವನ್ನು ಬಿಡದೆ 'ಎಂದಾದರೂ ಈ ರಹಸ್ಯವು ಹೊರಬೀಳುವುದು ನಿಶ್ಚಯ' ಎಂದು ಮನಸ್ಸನ್ನು ದೃಢಪಡಿಸಿಕೊಂಡವಳಾಗಿ ನಸುನಗುತ್ತಾ "ಅಮ್ಮಾ ನೀನು ಹೋಗಿಬಾ, ನನಗೇಕೋ ಬಹು ಬೇಜಾರಾಗಿದೆ, ನಾನು ಬರುವುದಿಲ್ಲ" ಎಂದು ನುಡಿದಳು.

ತಾಯಿಯು— "ನಾನು ಹೋದ ಕೂಡಲೇ, ನೀನು ಮಣಿಯ ಮನೆಗೆ ಹೊರಟುಬಿಡಬಾರದು. ಏನು? ಹಾಗೆ ಮಾಡುವುದಾಗಿದ್ದರೆ ನಾನು ಕ್ಲಬ್ಬಿಗೆ ಹೋಗುವುದಿಲ್ಲ."

ಸರಳಾ "ಇಲ್ಲಾಮ್ಮಾ ಖಂಡಿತ ಹೋಗುವುದಿಲ್ಲ. ನೀನು ನಿಶ್ಚಿಂತೆಯಾಗಿ ಕ್ಲಬ್ಬಿಗೆ ಹೋಗಿಬಾ" ಎಂದು ಸಸುನಗುತ್ತಾ ತಾಯಿಗೆ ಸಮಾಧಾನ ಹೇಳಿ ಕಳುಹಿಸಿಕೊಟ್ಟಳು.

ಸರಳೆಯು ನೆನೆಸಿದಂತೆಯೇ, ಕ್ಲಬ್ಬಿನಲ್ಲಿ ಕಾಲೇಜ್ ಪ್ರೊಫೆಸರ್, ಪ್ರಿನ್ಸಿಪಾಲ್ ಎಲ್ಲರೂ ಸರಳೆಯು ಏಕೆ ಪರೀಕ್ಷೆಗೆ ಬರಲಿಲ್ಲವೆಂದು ರತ್ನಾಬಾಯಿಯನ್ನು ಪ್ರಶ್ನಿಸಲಾರಂಭಿಸಿದರು. ರತ್ನಾಬಾಯಿಯು "ನೀಂವು ಪ್ರಾಯಶಃ ಅವಳನ್ನು ನೋಡಿರಲಾರಿರಿ. ಅವಳು ಒಂದು ದಿನವೂ ತಪ್ಪದೇ ಪರೀಕ್ಷೆಗೆ ಹೋಗಿಬರುತ್ತಿದ್ದಾಳೆ. ಅದಲ್ಲದೆ ಅವಳ ತಂದೆಯ ಹತ್ತಿರದಲ್ಲಿ ತಾನು ಬರೆದಿರುವ ಉತ್ತರಗಳನ್ನು ಸಹಾ ವಿವರಿಸಿ ಹೇಳುತ್ತಿದ್ದಾಳೆ" ಎಂದು ಮಾತನಾಡಲು, ಪ್ರಿನ್ಸಿಪಾಲರವರು ಇದರಲ್ಲೇನೋ ರಹಸ್ಯವಿದೆ, ಕಂಡುಹಿಡಿಯಬೇಕೆಂದು ರತ್ನಾಬಾಯಿಯನ್ನು ಸಂಗಡ ಕರೆದುಕೊಂಡು ಅವರ ಮನೆಗೆ ತಮ್ಮ ಮೋಟಾರಿನಲ್ಲಿ ಬಂದು ಸೇರಿದರು. ಆಗ ತಾನೇ ಮನೆಗೆ ಬಂದ ತನ್ನ ತಂದೆಗೆ ಸರಳೆಯು ತಾನು ಆ ದಿನದ ಪರೀಕ್ಷೆಯಲ್ಲಿ ಉತ್ತರ ಬರೆದಿರುವ ರೀತಿಯನ್ನು ವಿವರಿಸಿ ಹೇಳುತ್ತಿದ್ದಳು. ಎಲ್ಲರೂ ಸರಳೆಯನ್ನು ವಿಚಾರಿಸಲು ನಿರ್ವಾಹವಿಲ್ಲದೆ ಸರಳೆಯು ನಿಜಾಂಶವನ್ನು ಹೇಳಬೇಕಾಯಿತು. ಅದನ್ನು ಕೇಳಿ ರತ್ನಾಬಾಯಿಯೊಬ್ಬಳು ಅಸಮಾಧಾನಪಟ್ಟಳು. ಉಳಿದವರು ಅವಳ ಔದಾರ್ಯವನ್ನು ಪ್ರಶಂಸಿಸಿದರು. ಅಜ್ಞಾನದಿಂದ ತನ್ನ ಮಗಳ ಕೆಲಸವನ್ನು ಮೊದಲು ನಿಂದಿಸಿದ ರತ್ನಾಬಾಯಿಯೂ ನಂತರ ತನ್ನ ಮಗಳ ಗುಣ ವಿಶೇಷವನ್ನು ಸರಿಯಾಗಿ ಅರಿತು ಬಹಳ ಆನಂದಗೊಂಡಳು. ಸರಳೆಯ ಔದಾರ್ಯವೂ ತ್ಯಾಗವೂ ಅರಮನೆಯ ವಿದ್ಯುದ್ದೀಪಗಳ ಬೆಳಕಿನಂತೆ ಮೈಸೂರಿನಲ್ಲೆಲ್ಲೆಲ್ಲೂ ಹರಡಿತು. ಆ ಸದ್ಗುಣವತಿಯನ್ನು ಹೊಗಳದವರೇ ಇಲ್ಲ.

———

# ಮೋಹಿನಿ

ನಾನು ಇತ್ತ ಹೊರಟು ಬರುತ್ತಲೇ ಮೋಹಿನಿಗೆ ಜ್ವರವಂತೆ. ಏಕೊ! ಅವರು ತುಂಬ ತೊಂದರೆಯಲ್ಲಿರಬಹುದೆಂದು ೫೫ ರೂ. ತಂತಿಯಿಂದ ಕಳಿಸಿದೆ. ಅದು ತಿರುಗಿ ಬಂದುಬಿಟ್ಟಿತು. ಏಕೆ? ಏಕೋ!...ತಿರುಗಿ ನಾನು ಮಡಿಕೇರಿಗೆ ಕೆಲಸಕ್ಕಾಗಿ ಹೋದಾಗ—ಎರಡು ವರುಷಗಳ ತರುವಾಯ—ಆ ಮುಗುದೆಯ ನಗೆಮೊಗವನ್ನು ಕಾಣಲು ಹೋದೆ. ಕಂಡುದು ಏನು? ಏನೋ!

ಕತೆಗಾರ್ತಿ

# ಶ್ರೀಮತಿ ಪಡುಕೋಣ ವಾಸಂತಿಬಾಯಿ

ದಕ್ಷಿಣ ಕನ್ನಡದ ಶ್ರೀಮತಿ 'ವಾಸಂತಿಬಾಯಿ' ಯವರು ಕಲ್ಕತ್ತೆಯಲ್ಲಿ ನೆಲಸಿದ್ದಾರೆ. ಇವರು ಬಹುದಿನಗಳಿಂದಲೂ ಕತೆಗಳನ್ನು ಬರೆಯುತ್ತಿದ್ದಾರೆ. ಇವರು ಹಿಂದಿಯಲ್ಲಿಯೂ ಲೇಖನ ಕಲೆಯನ್ನು ಸಾಧಿಸಿದ್ದಾರೆ. ಕೆಲವು ಕನ್ನಡ ಕತೆಗಳನ್ನು ಹಿಂದಿಗೆ ಅನುವರ್ತಿಸಿ ಪ್ರಕಟಿಸಿದ್ದಾರೆ. ಇವರ ಕಥಾವಸ್ತುಗಳು ಸಮಾಜಸಾಮಾನ್ಯವಾದುವು; ಬಹುಶಃ ಹಾರ್ದಿಕವಾದುವು. ಇವರ ಭಾಷಾಪ್ರವಾಹವು ಶಾಂತವಾಗಿ ಗಂಭೀರವಾಗಿ ಹರಿಯುತ್ತಿದ್ದರೂ ಭಾವನೆಗಳ ಒತ್ತಡದಿಂದ ಅದರ ತೆರೆಗಳು ಒಮ್ಮೊಮ್ಮೆ ಒತ್ತಟ್ಟಿಗೇ ತೆರಳುತ್ತಿರುವುದಿಲ್ಲ. ಕತೆಗಳಲ್ಲಿ ವಿಚಾರಗಳನ್ನು ಮಂಡಿಸುವುದು ಹಟವೆಂದು ಇವರು ತಿಳಿದಂತಿದೆ. ಸರಲ ಜೀವನವನ್ನು ಸರಲ ಹೃದಯದಿಂದ ಚಿತ್ರಿಸುವುದೇ ಇವರ ವೈಶಿಷ್ಟ್ಯ. ಇವರ ಕಥನ ಕಲೆಯ ಪ್ರಗತಿ ಇನ್ನೂ ಒತ್ತರದಿಂದಾಗಲೆಂದು ಹಾರೈಸಬೇಕು. 'ಈ ಕತೆಯಲ್ಲಿ ಏನಿದೆ?' ಎಂದು ಸಕೃದ್ದರ್ಶನಕ್ಕೆ ತೋರಬಹುದು. ಹೆಣ್ಣಿನ ಪ್ರೇಮವಿಶಿಷ್ಟ ಜೀವನ, ಗಂಡಿನ ವ್ಯವಹಾರವಿಶಿಷ್ಟ ಜೀವನ, ಇವುಗಳ ಘರ್ಷಣವನ್ನು ಸೂಕ್ಷ್ಮವಾಗಿ ಹೇಳಿ ಕತೆಯನ್ನು ಒಳ್ಳೇ ಹೃದಯಂಗಮವಾಗಿ ಕೊನೆಗೊಳಿಸಲಾಗಿದೆ.

ಆ ಮಾತಿಗೆ ಆಗಲೇ ಹತ್ತು ವರುಷ ದಾಟಿಹೋಯಿತು. ಆದರೆ ಹಿಂದಿನ ದಿನಗಳನ್ನು ಸ್ಮರಿಸಿದರೆ ಈಗ ತಾನೇ ಜರುಗಿದಂತೆ ಭಾಸವಾಗುತ್ತದೆ. ನನಗೆ ಯಾವಾಗಲೂ ಸರ್ಕೀಟಿನ ಕೆಲಸ. ಮನೆಯಲ್ಲಿ ತಿಂಗಳಲ್ಲಿ ಮೂರು ದಿನ ಇರುವದೆಂದರೆ ಅಪರೂಪ. ಹೆಚ್ಚಾಗಿ ನನಗೆ ಮಡಿಕೇರಿಯಂತಹ ಮಲೇರಿಯ ಜ್ವರದ ಪ್ರದೇಶದಲ್ಲಿ ಸರ್ಕೀಟು. ಹಾಗಾಗಿ ಎಂದೂ ನಾನು ಒಬ್ಬನೇ ಸರ್ಕೀಟಿಗೆ ಹೋಗುತ್ತಿದ್ದೆ. ಅದು ಮಾತ್ರವಲ್ಲ, ನಮ್ಮ ಮನೆಯಲ್ಲಿ ಪುರಾತನ ವಿಚಾರಗಳು. ಒಂದುವೇಳೆ ನನ್ನ ಮನಸ್ಸಿನಲ್ಲಿ ನನ್ನಾಕೆಯನ್ನು ಕರಕೊಂಡು ಹೋಗಬೇಕೆಂದಿದ್ದರೂ ಮಾತಾಪಿತರು ಏನನ್ನುವರೋ ಎಂಬ ಅಂಜಿಕೆ. ನನ್ನಾಕೆಯೂ ಎಂದೂ ನನ್ನೊಡನೆ ಬರುವ ಉತ್ಸಾಹವನ್ನು ತೋರಿಸಲಿಲ್ಲ. ಅಂತು, ನನಗೆ ಮೊದಮೊದಲು ಸರ್ಕೀಟಾಗಿ ಆ ಮೇಲೆ ಕಾಯಂ ಮಡಿಕೇರಿಯಲ್ಲೇ ಕೆಲಸ ಆಯಿತು. ಆದರೂ ನಾನು ನನ್ನ ಮನೆಯವರನ್ನು ಕರಕೊಂಡು ಹೋಗಲಿಲ್ಲ. ಒಮ್ಮೆ ಕರಕೊಂಡು ಹೋದರೆ, ಚಿಕ್ಕ ಬಾಬುಗೆ ಅಸ್ವಸ್ಥವಾಯಿತು; ನನ್ನ ತಂದೆ ಕಾಯಿಲೆ ಬಿದ್ದರು. ಹಾಗಾಗಿ ಬೇಡಪ್ಪ ಎಂತ ನಾನು ಸುಮ್ಮನಿದ್ದೆ. ಎಲ್ಲಾದರೂ ನಾಲ್ಕೈದು ದಿನ ರಜೆ ಇದ್ದರೆ ನಾನು ಊರಿಗೆ ಹೋಗುತ್ತಿದ್ದೆ.

ಮಡಿಕೇರಿಯಲ್ಲಿ ನಮ್ಮ ಜಾತಿಯವರಾರೂ ಇರಲಿಲ್ಲ. ಒಳ್ಳೆಯ ಭೋಜನಾಲಯಗಳೂ ಇರಲಿಲ್ಲ. ಹಾಗಾಗಿ ನಾನು ಮಾಧವಿ ಎಂಬ ಒಬ್ಬ ಬಡ ವಿಧವೆಯ ಮನೆಯಲ್ಲಿ ಇರಲಾರಂಭಿಸಿದೆನು. ಆಕೆಗೆ ಒಬ್ಬ

ಮೋಹಿನಿ

ಹದಿನಾರು ವರುಷದ ಮಗಳು; ಇನ್ನಾರೂ ಇಲ್ಲ. ನೆರೆಹೊರೆಯವರ ಬೀಸುವ ಕುಟ್ಟುವ ಕೆಲಸಮಾಡಿ ಅವರಿಬ್ಬರೂ ಹೊಟ್ಟೆ ಹೊರೆಯುತ್ತಿದ್ದರು. ನನಗೆ ಇರಲಿಕ್ಕೆ ಸುಸಜ್ಜಿತವಾದ ಕೋಣೆಯೊಂದು ಅಲ್ಲಿ ಇತ್ತು. ನನ್ನ ಊಟ, ತಿಂಡಿ ಸಹಾ ಅವರಲ್ಲೇ. ಅವರಿಗೂ ನನ್ನಿಂದ ಸಹಾಯವಾಗುತ್ತಿತ್ತು. ಮೊದಮೊದಲು ಅಲ್ಲಿಯ ಮಲೇರಿಯಾ ನನಗೂ ತಾಗಿತು. ಆಗ ಆ ತಾಯಿ ಮಗಳಿಬ್ಬರೂ ನನ್ನ ಶುಶ್ರೂಷೆಯನ್ನೆಷ್ಟು ಮಾಡಿದರೆಂದು ಹೇಳಲಾರೆ. ಒಂದು ದಿನವೂ ಮನೆಬಿಟ್ಟಿರ ಬೇಕೆಂಬ ಭಾವನೆ ನನಗೆ ಬರಲಿಲ್ಲ. ಮಾಧವಿ ಹೆಚ್ಚಾಗಿ ನನ್ನೊಡನೆ ಮಾತನಾಡುತ್ತಿರಲಿಲ್ಲ. ಏನಾದರೂ ಮಾತನಾಡುವ ಸಂದರ್ಭಬಂದರೆ ಬಾಗಿಲಬಳಿಯಲ್ಲಿ ನಿಂತು ಮಾತನಾಡುವರು. ಜಾತಿಯಲ್ಲಿ ಕಡಿಮೆ ಎಂದೊ ಬಡತನವೆಂದೊ ಆಕೆಯ ಮನಸ್ಸಿನಲ್ಲಿ ತುಂಬ ವಿಷಾದ. ಪದೇಪದೇ ಅದು ಅವರ ಮಾತಿನಿಂದ ಪ್ರಕಟವಾಗುತ್ತಿತ್ತು. ನಾನು ಅವರಲ್ಲಿ ಇರಲಾರಂಭಿಸಿದ ನಂತರ ಮೋಹಿನಿಯು ಕೆಲಸಕ್ಕೆ ಹೋಗುತ್ತಿರಲಿಲ್ಲ. ಅವಳಿಗೆ ಓದು ಬರಹ ಕಲಿಯಬೇಕೆಂಬ ಆಶೆ ಹೆಚ್ಚು. ಆದರೆ ತಲೆ ಸ್ವಲ್ಪ ಮೊಂದು. ನಾನು ದಿನಾಲೂ ಆಕೆಗೆ ಒಂದು ಅರ್ಧ ಘಂಟೆಯ ಹೊತ್ತು ಕಲಿಸುತ್ತಿದ್ದೆ.

ಒಂದು ದಿನ ಅವಳು ಬರೆಯುವುದರಲ್ಲಿ ಏನೋ ತಪ್ಪು ಮಾಡಿದಳು. ಅದೇ ತಪ್ಪು ಅನೇಕಬಾರಿ ಮಾಡಿದ್ದಳು. ನನಗೆ ರೇಗಿತು. ಕೈಯಲ್ಲಿದ್ದ ಫುಟ್ ರೂಲರಿನಿಂದ ಆಕೆಯ ತಲೆಯ ಮೇಲೆ ಹೊಡೆದೆನು. ಪಾಪ! ಮರ್ಮಕ್ಕೆ ತಾಗಿತು ಪೆಟ್ಟು. ಕಣ್ಣು ಕತ್ತಲೆಬಂದು ಬಿದ್ದಳು. ಆ ಮೇಲೆ ನಾನೇ ಕಣ್ಣಿಗೆ ನೀರುಹಚ್ಚಿ ಎಬ್ಬಿಸಿದೆ. ಎಲ್ಲಿ ಈ ಸಮಾಚಾರ ತಾಯಿಗೆ ಹೇಳುತ್ತಾಳೋ ಎಂಬ ದಿಗಿಲು ನನಗೆ. ಆದರೆ ಆ ಮುಗ್ಧೆ ಒಂದು ದಿನವಾದರೂ ಬಾಯೆತ್ತಲಿಲ್ಲ.

ನಾನು ಮನೆಗೆ ಬರುವಾಗ ಮೋಹಿನಿಯು ಕೋಣೆಯೊಳಗಿನ ಪ್ರತಿಯೊಂದು ವಸ್ತುವನ್ನು ಆಯಾ ಜಾಗೆಯಲ್ಲಿಟ್ಟು ನನ್ನ ದಾರಿಯನ್ನು ನೋಡುತ್ತಾ ಬಾಗಿಲಲ್ಲಿ ನಿಲ್ಲುವಳು. ನನ್ನನ್ನು ಕಂಡೊಡನೆ ಸೆರಗನ್ನು ಸಾವರಿಸಿಕೊಂಡು ನನ್ನ ಕೋಟು ತೆಗೆದು ಇಡುವಳು.

ಕೈಕಾಲು ತೊಳೆಯುಲಿಕ್ಕೆ ನೀರು ತಂದು ಕೊಡುವಳು. ಕಾಫಿ ತಿಂಡಿ ತಂದು ಮೇಜಿನಮೇಲೆ ಇಟ್ಟು ತಾನು ಹತ್ತಿರ ನಿಲ್ಲುವಳು. ಮೊದ ಮೊದಲು ನಾನು ಹೆಚ್ಚಾಗಿ ಆಕೆಯ ಹತ್ತಿರ ಮಾತನಾಡುತ್ತಿರಲಿಲ್ಲ. ಆದರೆ, ಸಲಿಗೆ ಹೆಚ್ಚಿದಂತೆ ನಾನು ಆಕೆಯೊಡನೆ ಮಾತನಾಡುತ್ತಲೂ ಇದ್ದೆ. ಒಂದೊಂದು ವೇಳೆ ಅವಳ ಕೆಲಸದಲ್ಲಿ ಸ್ವಲ್ಪ ಹೆಚ್ಚುಕಡಿಮೆ ಯಾದರೆ ರೇಗುತ್ತಲೂ ಇದ್ದೆ. ಒಂದೊಂದು ವೇಳೆ ಹಾಸ್ಯ ವಿನೋದ ಮಾಡುತ್ತಲೂ ಇದ್ದೆ. ಆದರೆ ಸದೈವ ಮೋಹಿನಿಯ ಮುಖದ ಮೇಲೆ ಮುಗುಳುನಗೆಯು ವಿನಾ ಕೋಪವಾಗಲೀ ಬೇಸರವಾಗಲೀ ಒಮ್ಮೆಯೂ ಕಾಣಲಿಲ್ಲ.

ಒಮ್ಮೆ ನಾನು ಆಕೆಗೆ ಒಂದು ಐದು ರೂಪಾಯಿಯ ಸೀರೆಯನ್ನೂ ಒಂದು ಕುಪ್ಪಸವನ್ನೂ ಓದು ಬರಹದಲ್ಲಿ ಪಾಸಾಗಿದ್ದಕ್ಕಾಗಿ ಕೊಟ್ಟಿದ್ದೆ. ಅದನ್ನು ಆಕೆ ತನ್ನ ಹಳೇ ಪೆಟ್ಟಿಗೆಯಲ್ಲಿ ಬಲು ಜಾಗ್ರತೆಯಿಂದ ಇಟ್ಟಿದ್ದಳು. ಒಂದು ದಿನ ನನ್ನ ತಲೆಯಲ್ಲಿ ಆಕೆಯ ಫೋಟೋ ತೆಗೆಯುವ ಆಲೋಚನೆ ಬಂತು. ಆಗ ತಾನೇ ಹೊಸತಾಗಿ ನಾನು ಕೆಮೆರಾ ತೆಗೆದುಕೊಂಡಿದ್ದೆ. ಮೋಹಿನಿಯನ್ನು ಕರೆದು ನನ್ನ ಪೆಟ್ಟಿಗೆಯಿಂದ ಕೆಮೆರಾ ತೆಗೆಯಲು ಹೇಳಿದೆ. ಆಕೆಯು ತೆಗೆಯುವಾಗ, ಅದರ ಕೆಳಗೆ ಚಿತ್ರಗಳ ಆಲಬಾಮು ಪುಸ್ತಕವಿತ್ತು, ಅದನ್ನು ತೆಗೆದು ನೋಡಲಾರಂಭಿಸಿದಳು. ಅದರಲ್ಲಿ ನನ್ನಾಕೆಯ ಫೋಟೋ ಮೊದಲಿತ್ತು. ಆ ಮೇಲೆ ನಮ್ಮಿಬ್ಬರ ಫೋಟೋ ಬೇರೆ ಇತ್ತು. ಕೆಳಗಡೆ ನಮ್ಮ ಬಾಬುವಿನ ಮತ್ತು ಕಿಶೋರಿಯ ಚಿತ್ರಗಳಿದ್ದವು. ಮೋಹಿನಿಯು ಎಷ್ಟೋ ಹೊತ್ತು ನೋಡಿದಳು. ಯಾವುದೋ ತಂದ್ರಿಯಲ್ಲಿ ಮಗ್ನಳಾಗಿದ್ದಳು. 'ಮೋಹಿನಿ' ಎಂದು ಕರೆದ ಶಬ್ದಕ್ಕೆ ಬೆಚ್ಚಿಬಿದ್ದು ಅವಳ ಕಣ್ಣಿನಲ್ಲಿ ತುಂಬಿಬಂದ ಹನಿಗಳೆರಡು ಚಿತ್ರದ ಮೇಲೆ ಬಿದ್ದವು. ಆಕೆಯು ಅವನ್ನು ಎಷ್ಟೋ ಪ್ರಯತ್ನಮಾಡಿ ಅಳಿಸಿದಳು. ಆದರೆ ಗುರುತು ಹೋಗಲಿಲ್ಲ. ನಾನು ತೆಗೆದ ಚಿತ್ರಗಳಲ್ಲಿ ಅವು ಅತ್ಯುತ್ತಮವಾಗಿದ್ದವು. ನನಗೆ ಸಿಟ್ಟು ಬಂತು. ಆದರೆ ಆಕೆಯ ಮ್ಲಾನಮುಖವು ನನ್ನನ್ನು ಮೌನವನ್ನು ಧರಿಸುವಂತೆ ಮಾಡಿತು.

ಮೋ
ಹಿ
ನಿ

ನಾನು ಆಲಬಾಮನ್ನು ಕೈಯಲ್ಲಿ ತೆಗೆದುಕೊಂಡು ಮೋಹಿನಿಯನ್ನು ಹತ್ತಿರ ಕರೆದು ನಮ್ಮ ಬಾಬು, ಕಿಶೋರಿಯ ಫೋಟೊ ತೋರಿಸಿದೆ. ಆವಳು ತನಗೂ ಪ್ರತಿಯೊಂದು ಫೋಟೋವಿನ ಕೋಪಿಯೊಂದನ್ನು ಕೊಡಲು ಕೇಳಿದಳು. ನಾನು ಇನ್ನೊಮ್ಮೆ ಕೊಡುತ್ತೇನೆಂದೆ. ಹೀಗೆಯೇ ಎಷ್ಟೋ ಸಲ ಹೇಳಿದರೂ ಒಂದುಸಾರಿಯೂ ಫೋಟೋಗಳನ್ನು ಕೊಡಲು ನನಗೆ ಅವಕಾಶವಾಗಲಿಲ್ಲ. ಅಂದು ಆಕೆಯ ಫೋಟೊ ತೆಗೆಯಲಾಗಲಿಲ್ಲ. ಹೊತ್ತಾಗಿ ಹೋಯಿತು. ಕೆಮೆರಾದಲ್ಲಿ ಫಿಲ್ಮು ಕಡಿಮೆ ಇತ್ತು.

ಹೀಗೆಯೇ ಮೂರು ವರ್ಷಗಳು ಕಳೆದುವು. ನನಗೆ ಮಡಿಕೇರಿಯಿಂದ ತಿರುಗಿ ನಮ್ಮೂರಿಗೆ ವರ್ಗವಾಗುವ ಯೋಗ ಬಂತು. ನಾನು ಬಾಡಿಗೆಯ ರೂಪಾಯಿಗಳನ್ನು ಮಾಧವಿಗೆ ಕೊಡುತ್ತಿರುವಾಗ ಹೇಳಿದೆ: ನನಗೆ ವರ್ಗವಾಗುವುದರಲ್ಲಿದೆ ಎಂತ. ಮೋಹಿನಿಯು ನನ್ನ ಟೇಬಲಿನ ಮೇಲಿನ ಪುಸ್ತಕಗಳನ್ನು ಸರಿಮಾಡುತ್ತಿದ್ದಳು. ನನ್ನ ಮಾತುಗಳನ್ನು ಕೇಳಿದಾಕ್ಷಣ ಅವಳ ಕೈಗಳು ಅಲ್ಲೇ ನಿಂತುವು. ಸಾಯಂಕಾಲ ನಾನು ಮನೆಗೆ ಬರುವ ಹೊತ್ತಿಗೆ ಮೋಹಿನಿಯು ಹಿಂದುಗಡೆಯ ಜಗುಲಿಯ ಮೇಲೆ ಕೂತಿದ್ದಳು. ಎಂದೂ ಪ್ರಫುಲ್ಲವಾಗಿರುವ ಅವಳ ಮುಖವು ಬಾಡಿತ್ತು. ಏನನ್ನೋ ಯೋಚಿಸುತ್ತಿದ್ದಳು. ಅಂದು ಒಂದೂ ಅವಳ ಕೆಲಸ ಪೂರ್ಣವಾಗಿರಲಿಲ್ಲ. ನಾನು ಹಿಂದುಗಡೆಯಲ್ಲಿ ಬಂದು ನಿಂತಿದ್ದನ್ನು ಅವಳು ಕಾಣಲಿಲ್ಲ. "ಮೋಹಿನಿ" ಎಂದು ಕರೆದ ಶಬ್ದಕ್ಕೆ ಬೆಚ್ಚಿಬಿದ್ದು ಎದ್ದಳು. ಸೆರಗನ್ನು ಸಾವರಿಸಿಕೊಂಡು ಕೋಣೆಗೆ ಓಡಿದಳು. ಅಂದೇ ರಾತ್ರಿ ನನಗೆ ವರ್ಗವಾದ ಟೆಲಿಗ್ರಾಮು ಬಂತು.

ನಾನು ಹೊರಡುವ ದಿನ ಮೋಹಿನಿಗೆ ಊಟ ಸಹ ಇಲ್ಲ. ಅತ್ತಿತ್ತ ಸಾಮಾನು ಸಮರಿಸಿ ಕಟ್ಟುವುದೇ ಕೆಲಸ. ತಾಯಿಯೂ ಮಗಳೂ ಇಬ್ಬರೂ ತುಂಬ ವಿಷಾದದಿಂದಿದ್ದರು. ನಾನು ಅವರಲ್ಲಿ ಬಂದಾರಭ್ಯ ಅವರಿಗೆ ಹಣದ ತೊಂದರೆ ಇರಲಿಲ್ಲ. ನಾನು ಹೋಗುವಾಗ ಸಾಶ್ರುನೇತ್ರಗಳಿಂದ ಬಂದು ಮೋಹಿನಿಯು ನನ್ನ ಕಾಲಿಗೆರಗಿದಳು. ಮತ್ತು "ಏನಾದರೂ ನನ್ನ ತಪ್ಪಿದ್ದರೆ ಕ್ಷಮಿಸೋಣವಾಗಲಿ" ಎಂದಳು.

ನಾನು "ಹುಚ್ಚಿ, ಯಾರು ತಪ್ಪು ಮಾಡಿದವರು, ಯಾರು ಕ್ಷಮಿಸು ವವರು ? ಏಳು" ಎಂತ ಅವಳ ಕೈಹಿಡಿದು ಎಬ್ಬಿಸಿದೆ.

ಬಸ್ ಸ್ಟೇಶನಿನವರೆಗೆ ತಾಯಿಮಗಳಿಬ್ಬರೂ ಬಂದಿದ್ದರು. ಮೋಹಿನಿಯ ಆ ಮ್ಲಾನಮುಖವು ಎಂದೂ ಮರೆಯುವಂತಿಲ್ಲ. ಬಸ್ ಹೋರ್ನ್ ಕೊಟ್ಟಿತು. ನೀರು ತುಂಬಿದ ಕಣ್ಣುಗಳಿಂದ ಥರಥರಿಸುವ ತುಟಿಗಳಿಂದ, ಮೋಹಿನಿಯು ಕೇಳಿದಳು :

"ಎಂದಿಗೆ ತಿರುಗಿಬರುವುದು ?"

ನಾನು "ಮೋಹಿನಿ, ತಿರುಗಿ ಬರುವ ಹಾಗಿಲ್ಲ" ಎಂದೆನು.

ಬಸ್ಸು ಬಿಟ್ಟಿತು. ಮೋಹಿನಿಯು ರೆಪ್ಪೆಗಳನ್ನು ಮುಚ್ಚದೇ ಬಸ್ಸನ್ನು ನೋಡುತ್ತಿದ್ದಳು. ಕಣ್ಮರೆಯಾಗುವ ತನಕ ಖಿಡಕಿಯಿಂದ ನಾನು ನೋಡುತ್ತಿದ್ದೆನು. ಅಂದು ರಾತ್ರಿಯೆಲ್ಲಾ ಮೋಹಿನಿಯ ಹಿಂದಿನ ಮುಗುಳುನಗೆಯೂ ಅಂದಿನ ಕಾತರವಾದ ನೇತ್ರಗಳೂ ನನ್ನ ಮನಃ ಚಕ್ಷುವಿನಿಂದ ಅತ್ತಿತ್ತಲಾಗಲಿಲ್ಲ,

. . . . . . .

ವರ್ಷದ ನಂತರ ಒಂದು ದಿನ ನಾನು ಬಾಬುವನ್ನಾಗಲಿ ಕಿಶೋರಿಯನ್ನಾಗಲಿ ಎಂದೂ ಎತ್ತಿ ಆಡಿಸಿದವನಲ್ಲ. ಇಂದು ಪುಟ್ಟ ಮಾಲತಿಯನ್ನು ಎತ್ತಿಕೊಂಡು ಆಡಿಸುತ್ತ ಕುಳಿತಿದ್ದೆ. ಆ ಎಂಟು ತಿಂಗಳ ಮಗುವು ನನ್ನನ್ನು ನೋಡಿ ನಗುತ್ತಿತ್ತು. ಆ ನಗುವಿನಲ್ಲಿ ಮೋಹವಿತ್ತು, ಮಾಧುರ್ಯವಿತ್ತು. ಯಾವುದೋ ಹಳೆಯ ನೆನಹು ನನ್ನ ಹೃದಯವನ್ನು ಚುಚ್ಚುತ್ತಿತ್ತು. ಅಂದೇ ಟಪ್ಪಾಲಿನವನು ಒಂದು ಲಕೋಟೆ ತಂದು ಕೊಟ್ಟನು.

ಮಾಧವಿಯು ಯಾರ ಕೈಯಿಂದಲೋ ಬರೆಸಿದ್ದಳು.

"ಶ್ರೀಯುತ ರಾಘವರಾಯರ ಚರಣಗಳಲ್ಲಿ.

ನಮಸ್ಕಾರಗಳು. ಚಿ. ಮೋಹಿನಿಗೆ ನೀವು ಹೊರಟುಹೋದಂದಿನಿಂದ ಜ್ವರ. ಏನೂ ಗುಣವಿಲ್ಲ. ಈಗ ತುಂಬ ಅಸ್ವಸ್ಥಳಾಗಿದ್ದಾಳೆ. ಒಮ್ಮೆ ತಮ್ಮನ್ನು ನೋಡಬೇಕೆಂತ ಹಂಬಲಿಸುತ್ತಾಳೆ. ಪತ್ರ ಓದಿದೊಡನೆ ಒಮ್ಮೆ ಬರಬೇಕಾಗಿ ಬೇಡುತ್ತಿರುವ,

**ಮಾಧವಿ**"

ಮೋ
ಹಿ
ನಿ

ನಾನು ಎಷ್ಟೋ ಹೊತ್ತು ಯೋಚಿಸಿದೆ, ಹೋಗಲೋ ಬೇಡವೋ ಎಂತ. ಇಪ್ಪತ್ತೈದು ರೂಪಾಯಿ ತಂತಿಯ ಮೂಲಕ ರವಾನಿಸಿದೆ. ಕೆಲವು ದಿನಗಳಲ್ಲಿ ರೂಪಾಯಿ ಹಿಂತಿರುಗಿ ಬಂದಿತು. ನನಗೆ ಇದರ ಗೂಢವು ತಿಳಿಯಲಿಲ್ಲ. ನಾನು ಹೆಚ್ಚಿಗೆ ತಿಳಿಯಲು ಆತುರಪಡಲೂ ಇಲ್ಲ.

. . . . . . .

ಎರಡು ವರುಷದ ನಂತರ ನನಗೆ ತಿರುಗಿ ಮಡಿಕೇರಿಗೆ ಹೋಗುವ ಕೆಲಸ ಬಂತು. ನಾನು ಆಗ ಮಾಧವಿಯ ಮನೆಗೆ ಹೋದೆ. ಅಲ್ಲಿ ಯಾರೋ ಬೇರೊಬ್ಬರಿದ್ದರು. ಮಾಧವಿ ಎಲ್ಲಿ ಎಂದು ಕೇಳಿದಾಗ ಅವರಿಗೆ ತಿಳಿಯಲಿಲ್ಲ. ಕೊನೆಗೆ ಊಟ ಸಹಾ ಸಿಕ್ಕಲಿಲ್ಲ ನನಗೆ. ಏನನ್ನೋ ತಿಂದು ಹೊಟ್ಟೆ ತುಂಬಿಸಿಕೊಂಡು ದಾರಿಯಿಂದ ಹೋಗುತ್ತಿದ್ದೆ. ಅಲ್ಲೊಬ್ಬ ಹುಚ್ಚಿ ಏನನ್ನೋ ಮಾತನಾಡುತ್ತಲೂ, ಅಳುತ್ತಲೂ ಇದ್ದಳು. ಮೈಮೇಲಿನ ಬಟ್ಟೆಗಳೆಲ್ಲಾ ಚೂರುಚೂರಾಗಿದ್ದುವು. ತಲೆಯ ಕೂದಲೆಲ್ಲಾ ನೋಡಿದರೆ ಎಷ್ಟೋ ವರ್ಷಗಳಿಂದ ಎಣ್ಣೆಯಿಲ್ಲದಂತಿದ್ದುವು. ಘಳಿಗೆಗೊಮ್ಮೆ ಕಣ್ಣುಗಳನ್ನು ಗರಗರ ತಿರುಗಿಸುತ್ತಾ ಹುಚ್ಚಿಯು "ಘೋಷಿಸಿ, ಘೋಷಿಸಿ, ಆಗೋ ರಾಜರು ಬಂದರು!" ಎಂತ ಹಾಡಿ ಕುಣಿಯುತ್ತಿದ್ದಳು. ನನಗೆ ಸ್ವರವು ಪರಿಚಯದಂತಿತ್ತು. ಹತ್ತಿರ ಹೋದೆನು. ಹುಚ್ಚಿಯು ಕೆಲವು ನಿಮಿಷ ನನ್ನನ್ನೇ ದಿಟ್ಟಿಸಿ ನೋಡಿ ಮತ್ತೊಮ್ಮೆ "ಘೋಷಿಸಿ, ಆಗೋ, ಬಂದರು, ನಿನ್ನನ್ನು ನೋಡಲು ಬಂದರು" ಎಂತ ಕುಣಿದಳು. ನನ್ನ ಹತ್ತಿರ ಬಂದಳು. ನನ್ನ ಮುಖದ ಮೇಲೆ ಒಮ್ಮೆ ತುಪ್ಪಿದಳು. ನಾನು ಅವಳ ಕೈಹಿಡಿದೆ. ಕೈಯನ್ನು ಬಿಡಿಸಿಕೊಂಡು ಓಡಿದಳು. ಎದುರಿನಿಂದ ಮೋಟಾರೊಂದು ವೇಗದಿಂದ ಬರುತ್ತಿತ್ತು. ಒಮ್ಮೆ "ಘೋಷಿಸಿ, ನಾನೂ ಬಂದೆ" ಎಂದು ಕಿರುಚಿದ ಧ್ವನಿ ಕೇಳಿಸಿತು. ನಾನು ಓಡಿಹೋದೆ. ಅಲ್ಲಿ ಜನರೂ ತುಂಬಿದರು. ಹುಚ್ಚಿಯ ಪ್ರಾಣಪಕ್ಷಿಯು ಆಗಲೇ ಹಾರಿಹೋಗಿತ್ತು!

———

# ಅದೇ ಇನ್ನೊಮ್ಮೆಯಾಗಲಿ

ಸುಖದ ಅನುಭವಕ್ಕಿಂತ ಆದರ ನೆನಹು ಎಷ್ಟು ಸವಿ! ನೆನಹನ್ನನುಭವಿಸಿದಂತೆಲ್ಲ ಅತೃಪ್ತ ಮನಸಿನ ಲಾಲಸೆಯು ಅದೊಂದು ಸುಖ. ಅವಳ ಏಸೂತ್ನ ಪ್ರಣಯ ಜೀವನದಲ್ಲಿ ಆತನ ಗೆಳೆಯರ ಎದುರುಗಳು.. ಆತನೊಂದಿಗೆ ಸಲ್ಲಾಪಗಳಲ್ಲಿ ಕಳೆದ ದಿನಗಳು.. ಪ್ರೇಮ ಜಲದಲ್ಲಿ ಸುಮ್ಮನೆ ಹುಟ್ಟಿದ ಹುಸಿ ಜಗಳದಲೆಗಳು..! .. ಇನ್ನೊಮ್ಮೆಯಾಗಲಿ.

ಕತೆಗಾರ್ತಿ

# ಶ್ರೀಮತಿ ಸುಮಿತ್ರಮ್ಮ

ಮೈಸೂರಿನ ಶ್ರೀ. ಎಚ್. ಎ. ಗೋವಿಂದರಾವ್, ಸೇವಾನಿವೃತ್ತ ಸಬ್ ಅಸಿಸ್ಟಂಟ್ ಕಾಂಜರ್ವೇಟರ್ ಆಫ್ ಫಾರೆಸ್ಟ್ಸ್ ಅವರ ಮಕ್ಕಳು ಈ ಶ್ರೀಮತಿ ಸುಮಿತ್ರಮ್ಮ; ಶ್ರೀ. ಎಚ್. ಸೀತಾರಾಮರಾಯರ ತಂಗೆಯರು. ಇಂಗ್ಲಿಷ್ ಕನ್ನಡ ಲೋವರ್ ಸೆಕೆಂಡರಿಯಲ್ಲಿ ಉತ್ತೀರ್ಣರಾದ ಮೇಲೆ ಇವರ ವ್ಯಾಸಂಗವೆಲ್ಲ ನಡೆದುದು ಮನೆಯಲ್ಲಿಯೆ. ಹಿಂದೀ ಮಾಧ್ಯಮಿಕ ಪರೀಕ್ಷೆಯಲ್ಲಿ ತೇರ್ಗಡೆಯಾಗಿದ್ದಾರೆ. ಮೈಸೂರಿನ ಮಹಿಳಾ ಸೇವಾ ಸಮಾಜದ 'ಗೃಹಿಣಿ' ಎಂಬ ಹಸ್ತಲಿಖಿತ ಪತ್ರಿಕೆಯಲ್ಲ ಇವರು ಲೇಖನಗಳನ್ನು ಬರೆಯುತ್ತಾರೆ. ಪ್ರಕಟವಾದ ಇವರ ಕತೆ ಇದೆ ಮೊದಲನೆಯದು. ಸಣ್ಣ ಕತೆಗೆ ಸಲ್ಲುವ ಸಲಿಗೆಯ ಶೈಲಿಯೂ ಸಹಜ ಕಥನವೂ ಇದರಲ್ಲಿ ಶಿಶುರೂಪದಲ್ಲಿ ಕಾಣಬಹುದು. ಹಿಂದಿಯ ಪರಿಣಾಮದಿಂದ ಸಂಸ್ಕೃತ ಪದಪ್ರಯೋಗಗಳು ತಲೆಯೆತ್ತಿವೆ.

ಬೆಂಗಳೂರು ಶಿವೇಶ್ವರ ಪೇಟೆಯಲ್ಲಿ ಒಂದು ಸಣ್ಣ ಮನೆ. ಮನೆಯ ಮುಂಭಾಗದಲ್ಲಿ ಕಾಂಪೌಂಡಿನಲ್ಲಿ ಹೂವಿನ ಗಿಡಗಳು. ಮಲ್ಲಿಗೆ ಹೂಗಳು ಅರ್ಧ ಅರ್ಧ ಅರಳಿವೆ. ಅದರ ಸುವಾಸನೆಯು ಎಲ್ಲೆಡೆಯಲ್ಲೂ ಹರಡಿದೆ. ಮನೆಯೊಳಗೆ ಪ್ರವೇಶಿಸುತ್ತಲೇ, ಎಡಭಾಗದ ಕೊಠಡಿಯಲ್ಲಿ ಅನಂತು ಮಂಚದಮೇಲೆ ಮಲಗಿದ್ದಾನೆ. ಅವನ ಪತ್ನಿ ಸರಸು ಹಿಂದೂ ಪೇಪರನ್ನು ಓದುತ್ತಿದ್ದಾಳೆ.

ಸ್ವಲ್ಪ ಹೊತ್ತಾದನಂತರ ಅನಂತು, ''ಸಾಕುಬಿಡು ಸರಸೂ, ಓದಿ ನಿನಗೆ ಆಯಾಸವಾಗಬಹುದು. ನಿನಗೆ ಇಷ್ಟುಮಟ್ಟಿಗೆ ಓದಲು ಬರುವುದು ನನಗೆ ಗೊತ್ತಿರಲಿಲ್ಲ. ಲೋಯರ್ ಸೆಕಂಡರಿ ಪ್ಯಾಸುಮಾಡಿದವರು ಇಷ್ಟರಮಟ್ಟಿಗೆ ಓದುವುದು ಅಪರೂಪ'' ಎಂದ.

ಸರಸು ಏನನ್ನೂ ಹೇಳಲಿಲ್ಲ. ಅವಳಿನ್ನೂ ಗಂಡನ ಮನೆಗೆ ಒಂದು ಇಪ್ಪತ್ತು ದಿನಗಳಾಗಿದ್ದುವು. ನಾಚಿಕೆಯಿಂದ ಅವಳ ಮುಖವು ಕೆಂಪೇರಿತು, ತಲೆ ತಗ್ಗಿಸಿದಳು. ಅನಂತರ ಅವಳ ಭುಜದಮೇಲೆ ಕೈಹಾಕಿ ಹೇಳಿದ: ''ಏನು ಸರಸೂ, ಹಾಸ್ಯ ಮಾಡುತ್ತೇನೆಂದುಕೊಂಡೆಯಾ? ನಿಜವಾಗಿಯೂ ಇಲ್ಲ. ನಿನ್ನಂಥ ಪತ್ನಿಯನ್ನು ಪಡೆದುದು ನನ್ನ ಪುಣ್ಯ.''

ಸರಸು ಪಕ್ಕದಲ್ಲಿದ್ದ ವೀಳ್ಯದೆಲೆಯ ತಟ್ಟೆಯನ್ನು ಅತ್ತ ಎಳೆದುಕೊಂಡು, ವೀಳ್ಯದೆಲೆ ಮಡಿಸಲಾರಂಭಿಸಿದಳು. ಇಬ್ಬರೂ ಮೌನವಾಗಿದ್ದರು. ಅವರಿಗೆ ಮಾತನಾಡುವುದಕ್ಕಿಂತ ಮೌನವೇ ಪರಮ ಸೌಖ್ಯವಾಗಿತ್ತು.

ಅದೇ ಇನ್ನೊಮ್ಮೆ ಯಾಗಲಿ

ರಂ ಇಷ್ಟರಲ್ಲಿ ಬಾಗಿಲು ತಟ್ಟಿದ ಶಬ್ದ. ಸರಸು ಏಳುವುದಕ್ಕೆ ಹೋದಳು.
ಗ
ಪ ಆದರೆ ಅವಳಿಗೆ ಒಬ್ಬಳೇ ಹೊರಗೆ ಹೋಗಲು ಹೆದರಿಕೆ. ಇದನ್ನು ತಿಳಿದು
ಲ್ಲಿ ಕೊಂಡು ಅನಂತು ತಾನೇ ಹೋಗಿ ಬಾಗಿಲು ತೆಗೆದ. ಬಾಗಿಲು ತಟ್ಟಿದವನು ಅವನ ಪರಮಮಿತ್ರನಾದ ನಾರಾಯಣರಾವ್‌ನ ತಮ್ಮ. "ಏಕೋ ಬಂದಿ?" ಎಂದ ಅನಂತು. "ಅಣ್ಣ ಈಗಲೇ ನಿಮ್ಮನ್ನು ಕರೆದುಕೊಂಡು ಬಾ ಎಂತ ಹೇಳಿದಾನೆ ಬರಬೇಕಂತೆ" ಎಂದ.

ಅನಂತೂಗೆ ಬಹಳ ಬೇಜಾರಾಯಿತು. ಸರಸೂ ಸಂಗಡ ಸಲ್ಲಾಪ ಮಾಡಬೇಕೆಂದು, ಅವನು ಕೇರಮ್ ಆಡಲೂ ಹೋಗಿರಲಿಲ್ಲ. ಈಗ ಮನೆಯಲ್ಲಿ ಅವನ ಅಕ್ಕ, ತಮ್ಮ ಎಲ್ಲರೂ ಮಲಗಿದ್ದರು. ಮನೆಬಿಟ್ಟು ಹೊರಡಲು ಇಷ್ಟವಿಲ್ಲ. ಆದರೆ ನಾರಾಯಣನು ಏನೆಂದುಕೊಳ್ಳುವನೋ? ಅವನು ಮೊನ್ನೆಯೇ ಎಂದ "ಏನು, ರಾಣಿಯವರು ಬಂದಮೇಲೆ ರಾಜರ ದರ್ಶನವಾಗುವುದೇ ದುರ್ಲಭವಾಗಿದೆ" ಎಂದು. ಇದನ್ನೆಲ್ಲಾ ಯೋಚಿಸಿ ಒಳಗೆ ಹೋಗಿ, "ಸರಸೂ, ನನ್ನ ಸ್ನೇಹಿತ ಹೇಳಿಕಳಿಸಿದಾನೆ, ಬೇಗ ಹೋಗಿ ಕಾಲು ಗಂಟೆಯೊಳಗೆ ಬಂದುಬಿಡುತ್ತೇನೆ. ಬಾಗಿಲು ಹಾಕಿಕೋ" ಎಂದು ಹೇಳಿ ಹೊರಟ. ಸರಸೂ ಅರೆಮನಸ್ಸಿನಿಂದ, ಬಾಗಿಲು ಹಾಕಿಕೊಂಡು ಒಳಗೆ ಬಂದಳು. ಅವಳಿಗೆ ಆ ಸ್ನೇಹಿತನ ಮೇಲೆ ತುಂಬಾ ಕೋಪಬಂತು. "ಏನು ಸ್ನೇಹಿತರೋ, ರಾತ್ರಿ ಹತ್ತು ಗಂಟೆಯಾದರೂ ಬಿಡುವಿಲ್ಲ" ಎಂದುಕೊಂಡಳು. ಏನು ಮಾಡುವುದು? ಅತ್ತಿಗೆಯವರು ನಿದ್ದೆಮಾಡಿದ್ದರು. ಅವಳಿಗೆ ಎದ್ದಿರಲು ಭಯ. ಮಲಗಿಬಿಟ್ಟರೆ ಪತಿಗೆ ಬಾಗಿಲು ತೆಗೆಯಬೇಕು ಎಂದು ಯೋಚಿಸಿ, ಮಂಚದ ಪಕ್ಕದಲ್ಲಿದ್ದ ಬೀರು ಬಾಗಿಲು ತೆಗೆದುನೋಡಿದಳು. ಆ ದಿನ ಲೈಬ್ರರಿಯಿಂದ ಅನಂತು ಪುಸ್ತಕ ತಂದಿರಲಿಲ್ಲ. ಏನೇನೋ ಹುಡುಕಿ, ಹಳೆಯ ಮಾಸಪತ್ರಿಕೆಯೊಂದನ್ನು ತೆಗೆದುಕೊಂಡು ಓದಲಾರಂಭಿಸಿದಳು. ಕಿಟಕಿಯ ಕಡೆ ನೋಟ ನೋಡಿ ಸಾಕಾಯಿತು. ಓದುತ್ತಾ ಇದ್ದಂತೆಯೇ ಅವಳ ಕಣ್ಣಲ್ಲಿ ನೀರು ತುಂಬಿತು.

ಕಥಾವಿಷಯ ಇಷ್ಟು: "ಸಾವಿತ್ರಿಯೆಂಬ ಹನ್ನೆರಡು ವರ್ಷದ
೧೦೨ ಹುಡುಗಿಗೆ ತಾಯಿ ಸತ್ತುಹೋಗುತ್ತಾಳೆ. ಅವಳಿಗೆ ಹತ್ತು ವರ್ಷದ

ತಮ್ಮನೊಬ್ಬ. ಅವಳು ತಾಯಿಗೋಸ್ಕರ ಬಹಳ ಅಳುತ್ತಾಳೆ. ಕೊಂಚ ದಿನದಮೇಲೆ ಅವಳ ತಂದೆ ಯೋಗ್ಯ ವರನಿಗೆ ಕೊಟ್ಟು ವಿವಾಹ ಮಾಡು ತ್ತಾರೆ. ಆದರೆ ಮದುವೆಯಾದ ಒಂದೆರಡು ತಿಂಗಳಲ್ಲೇ ಅವಳು ವಿಧವೆ ಯಾಗುತ್ತಾಳೆ. ಇಷ್ಟರಲ್ಲಿ ತಂದೆ ಎರಡನೆಯ ಮದುವೆ ಮಾಡಿಕೊಂಡು ಹೆಂಡತಿಯನ್ನೂ ಅತ್ತೆಯನ್ನೂ ಕರೆತರುತ್ತಾನೆ. ಅವರು ಇವರಿಬ್ಬರನ್ನೂ ಬಹಳ ಹಿಂಸೆ ಮಾಡುತ್ತಾರೆ. ಸಾವಿತ್ರಿಯು ವಿಧವೆಯಾದ ಮೇಲಂತೂ ಅವಳ ತೊಂದರೆಗೆ ಪಾರವೇ ಇರುವುದಿಲ್ಲ. ಅವಳು ಜೀವನದಲ್ಲಿ ಜಿಗುಪ್ಸೆ ಹೊಂದಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ.'' ಇದನ್ನು ಓದಿ ಸರಸೂಗೆ ಕಣ್ಣಲ್ಲಿ ನೀರು ಹರಿಯಲಾರಂಭವಾಯಿತು. ಅವಳು ಎಷ್ಟು ತಡೆದರೂ ಅದು ನಿಲ್ಲಲೇ ಇಲ್ಲ.

ಅತ್ತ ಅನಂತು ಸ್ನೇಹಿತನ ಮನೆಗೆ ಹೋಗಿ ಕಾಲು ಗಂಟೆಯಾ ಯಿತು; ಅರ್ಧ ಗಂಟೆಯಾಯಿತು. ಸ್ನೇಹಿತನು ಬರಲೇ ಇಲ್ಲ. ಕೊನೆಗೆ ಹತ್ತೂವರೆ ಗಂಟೆಗೆ ಮನೆಗೆ ಹೊರಟ.

'' ಸರಸೂ, ಸರಸೂ '' ಎಂದು ಕೂಗಿದ. ಉತ್ತರವಿಲ್ಲ. ಕಿಟಕಿಯಿಂದ ನೋಡಿದ. ಸರಸು ತಲೆ ಬೊಗ್ಗಿಸಿಕೊಂಡು, ಮೇಜಿನ ಹತ್ತಿರ ಕೂತಿ ದ್ದಳು. ಮತ್ತೊಮ್ಮೆ ಕೂಗಿದ. ಈಗ ಸರಸೂ ತಟ್ಟನೆದ್ದು ಬಾಗಿಲು ತೆಗೆ ದಳು. ಅನಂತು ಅವಳ ಕೈಹಿಡಿದುಕೊಂಡು '' ಏನು ಸರಸೂ, ಇನ್ನೂ ನಿದ್ದೆ ಬಂದಿಲ್ಲವೇ ?'' ಎಂದ. ಉತ್ತರವಿಲ್ಲ. '' ಬಂದದ್ದು ಹೊತ್ತಾಯಿ ತೆಂದು ಕೋಪವೋ ? ಅವನು ಏನೋ ಮಾತನಾಡಿಸುತ್ತಾ ಕೂತು ಬಿಟ್ಟ; ಬಿಡಲೇ ಇಲ್ಲ '' ಎಂದ. ಆಗಲೂ ಮೌನ. ಇಷ್ಟರಲ್ಲಿ ಅನಂತುವಿನ ಕೈಮೇಲೆ ಒಂದು ತೊಟ್ಟು ಕಣ್ಣೀರು ಬಿತ್ತು. ತಕ್ಷಣ ಚಕಿತನಾದ. '' ಏಕೆ ಸರಸೂ ಅಳುತ್ತಿದ್ದೀ ? ನಿದ್ದೆ ಮಾಡಬಾರದಾಗಿತ್ತೆ ? ಅಕ್ಕ ಬಾಗಿಲು ತೆಗೆಯುತ್ತಿದ್ದಳು '' ಎಂದ. ಸರಸೂ ಈಗಲೂ ಮಾತನಾಡಲಿಲ್ಲ. ಮೌನ ವಾಗಿ ಅಳುತ್ತಿದ್ದಳು. ಅನಂತು ಯೋಚಿಸಿದ '' ಇವಳು ತಾಯಿಯ ಮನೆಯನ್ನು ಬಿಟ್ಟುಬಂದು ಸ್ವಲ್ಪದಿನಗಳಾಗಿವೆ. ಬಹುಶಃ ಅಲ್ಲಿನ ನೆನಪು ಬಂದಿರಬಹುದು. ತಾಯಿಯನ್ನು ನೋಡಬೇಕೆಂದೆನಿಸಿರಬಹುದು.''

ಅವನ ಮನಸ್ಸು ಕರಗಿತು. ಅವಳನ್ನು ಹತ್ತಿರಕ್ಕೆ ಕರೆದುಕೊಂಡು ಮೃದುವಾಗಿ ಹೇಳಿದ: "ತಾಯಿಯನ್ನು ಜ್ಞಾಪಿಸಿಕೊಂಡೆಯಾ? ನೀನು ನೋಡಬೇಕೆಂದರೆ, ನಾನು ಯಾವಾಗ ಬೇಕಾದರೂ ಕರೆದುಕೊಂಡು ಹೋಗುತ್ತೇನೆ." ಅವಳು ಅವನ ಭುಜದಮೇಲೊರಗಿಕೊಂಡು ಸುಮ್ಮನಿದ್ದಳು. ಅನಂತು ಕೇಳಿದ "ಅಕ್ಕ ಏನಾದರೂ ಅಂದಳೇ?" ಸರಸು ತಲೆಯಲ್ಲಾಡಿಸಿದಳು.

ಅನಂತು ಏನೋ ಯೋಚಿಸುತ್ತಾ ಮೇಜಿನ ಕಡೆ ನೋಡಿದ. ಮಾಸಪತ್ರಿಕೆಯು ಅರ್ಧ ತೆರೆದಿಟ್ಟಿದೆ. ಅದರಲ್ಲಿನ ಕಥೆಯ ಹೆಸರು ಓದಿದ. ಅವನೂ ಆ ಕಥೆಯನ್ನು ಓದಿದ್ದ, ಆದರೆ ಅವನಿಗೆ ಇಷ್ಟು ವ್ಯಸನವಾಗಿರಲಿಲ್ಲ. ಏನೋ 'ಟ್ರಾಜೆಡಿ' ಎಂದುಕೊಂಡುಬಿಟ್ಟಿದ್ದ. ಸರಸು ಅದನ್ನು ಓದಿ, ಅದರಲ್ಲಿದ್ದಂತೆ ಸರ್ವವನ್ನೂ ಅನುಭವಿಸಿದಂತೆ ಅಳುತ್ತಾಳೆಂದು ತಿಳಿಯಿತು. ಅನಂತು ಅವಳ ಕಣ್ಣೀರೊರಿಸಿ, ಮುಂಗುರುಳನ್ನು ಸರಿಮಾಡುತ್ತಾ ಹೇಳಿದ: "ಹುಚ್ಚೀ, ಕತೆ ಓದಿ ಇಷ್ಟು ಅಳುತ್ತಾರೇನೆ? ಇನ್ನು ಮೇಲೆ ಇಂಥಾ ಕತೆಗಳನ್ನು ಓದಬೇಡ. ನಾನು ಒಳ್ಳೆಯ ಪುಸ್ತಕಗಳನ್ನು ತಂದು ಕೊಡುತ್ತೇನೆ."

ಸರಸು ಅನಂತುವಿನ ತೋಳ ಸೆರೆಯಲ್ಲೇ ನಿದ್ದೆಮಾಡಿದಳು.

. . . . . . .

ಒಂದು ಉಪವಾಸದ ದಿನ ಅನಂತೂಗೆ ಅವತ್ತು ರಜ. ಅವನು ಬೆಳಿಗ್ಗೆ ಸ್ನಾನಮಾಡಿ ಕಾಫಿ ತೆಗೆದುಕೊಂಡು ಯಾರೋ ಸ್ನೇಹಿತರ ಮನೆಗೆ ಹೋದ. ಸರಸು ಅಡಿಗೆ ಮಾಡುತ್ತಿದ್ದಳು. ಹನ್ನೊಂದೂವರೆ ಗಂಟೆಯಾಯಿತು. ಅಡಿಗೆಯೇನೋ ಮುಗಿಯುತ್ತಾಬಂತು. ಆದರೆ ಮಸಾಲೆ ಪುಡಿ ಬೇಕಾಗಿತ್ತು. ಅದು ಅವಳಿಗೆ ಸಿಕ್ಕುವಹಾಗಿರಲಿಲ್ಲ. ಅತ್ತಿಗೆಯವರನ್ನು ಎರಡುಸಲ ಕೇಳಿದಳು. ಅವರೇನೋ ಕೆಲಸದಲ್ಲಿದ್ದರು. ತೆಗೆದು ಕೊಡಲಿಲ್ಲ. ಅಷ್ಟುಹೊತ್ತಿಗೆ ಅನಂತು ಬಂದ. "ಇನ್ನೂ ಅಡಿಗೆಯಾಗಿಲ್ಲವೇ?" ಎಂದ. ಅತ್ತಿಗೆ ಬೇಗ ಎದ್ದು ಮಸಾಲೆಪುಡಿ ತೆಗೆದುಕೊಟ್ಟರು. ಸರಸು ಅಡಿಗೆ ಪೂರೈಸಿ ಎಲೆಹಾಕಿ ಊಟಕ್ಕೆ ಎಬ್ಬಿಸಿದಳು. ತನ್ನ ಅಡಿಗೆಯಾಗಿದ್ದರೂ ಮಸಾಲೆ ಪುಡಿ ಬೇಗ ಕೊಡಲಿಲ್ಲವೆಂದು ಅವಳಿಗೆ ಕೋಪಬಂದಿತ್ತು. ಅನಂತು ಊಟಕ್ಕೆ ಕುಳಿತುಕೊಂಡ.

ಇಲ್ಲಿಗೆ ಬಂದು ಮೂರು ತಿಂಗಳಾಗಿದ್ದರೂ, ಒಂದು ದಿನವೂ ಸರಸೂ ಅಡಿಗೆ ಮಾಡಿರಲಿಲ್ಲ. ಅವಳಿಗೆ ಎಂದೂ ಅಡಿಗೆಮಾಡಿ ಅಭ್ಯಾಸವಿಲ್ಲ. ಅವಳ ಮುಖವೆಲ್ಲ ಕೆಂಪಾಗಿಹೋಗಿತ್ತು. ಯಾರು ಏನೆನ್ನುವರೋ ಎಂಬ ಭಯ ಬೇರೆ. ಆದರೆ ಅಡಿಗೆಯೇನೋ ಚೆನ್ನಾಗಿತ್ತು. ಅನಂತುವಿನ ಊಟ ಪೂರೈಸುತ್ತಾ ಬಂತು. ಅವನು "ಸರಸೂ ನೀನೂ ಕೂತುಕೋ" ಎಂದ. "ಆಗಲಿ" ಎಂದಳು. ಇನ್ನೊಂದು ಸಲ ಹೇಳಿದ. "ಏನವಸರ ಕೂತರಾಯ್ತು" ಎಂದಳು. ಅನಂತು ತಾನು ಹೊತ್ತಾಗಿ ಬಂದುದಕ್ಕೆ ಹೀಗೆ ಹೇಳುತ್ತಾಳೆಂದು ರೇಗಿಕೊಂಡು "ನೀನು ಮುಂಚೆಯೇ ಊಟಮಾಡಬೇಕಾಗಿತ್ತು, ಯಾರು ಬೇಡ ಅಂದರು" ಎಂದು, ಇನ್ನೂ ಒಂದೆರಡು ತುತ್ತು ಇರುವಾಗಲೇ ಊಟಬಿಟ್ಟು ಹೊರಟುಹೋದ.

ಸರಸೂಗೆ ವ್ಯಸನವಾಯಿತು. ಅವಳಿಗೆ ಅವನು ಬೇಗ ಬರಲಿಲ್ಲವೆಂದು ಖಂಡಿತ ಕೋಪವಿರಲಿಲ್ಲ; ಹೊತ್ತಾಗಿ ಬಂದರೂ, ತನ್ನ ಅಡಿಗೆಯಾಗಿರಲಿಲ್ಲವಲ್ಲಾ ಎಂದು. ಇಷ್ಟಕ್ಕೇ ಇಷ್ಟು ಕೋಪ ಬರುತ್ತೆಂದು ಅವಳು ಎಣಿಸಿರಲಿಲ್ಲ. ಅವಳು ಊಟ ಮುಗಿಸಿ, ಎಲೆ ಅಡಿಕೆ ತಟ್ಟೆ ತೆಗೆದುಕೊಂಡು ರೂಮಿನೊಳಗೆ ಹೋದಳು. ಅನಂತು ಪೇಪರು ಓದುತ್ತಾ ಇದ್ದ. ಅವಳು ಸ್ವಲ್ಪ ಹೆದರಿಕೊಂಡೇ ಒಳಗೆ ಹೋಗಿ, ಅಡಿಕೆಯನ್ನು ಕೊಡುವುದಕ್ಕೆ ಹೋದಳು. ಆದರೆ ಅನಂತು ಅವಳ ಕಡೆ ತಿರುಗಿ ಸಹ ನೋಡಲಿಲ್ಲ. ಸ್ವಲ್ಪ ಹೊತ್ತಿನ ಮೇಲೆ, ತಾನೇ ಒಂದೆರಡು ಎಲೆ ಮಡಿಸಿ ಹಾಕಿಕೊಂಡು ಎಲ್ಲಿಯೋ ಹೊರಟುಹೋದ.

ಪ್ರತಿನಿತ್ಯ ಅಡಿಕೆಲೆ ಹಾಕಿಕೊಳ್ಳುವುದೇ ಅರ್ಧಗಂಟೆಯಾಗುತ್ತಿತ್ತು. ಆಫೀಸಿಗೆ ಹೋಗುವಾಗ ಎಷ್ಟು ಹೊತ್ತಾಗಿದ್ದರೂ, ಅನಂತು ಸರಸು ಕೊಟ್ಟ ಅಡಿಕೆಲೆಯನ್ನು ಹಾಕಿಕೊಳ್ಳದೆ ಹೋಗುತ್ತಿರಲಿಲ್ಲ. ಅಂಥವನು ರಜಾದಿನ ಈ ದಿನ ಸಣ್ಣ ಮಾತಿಗೆ ಇಷ್ಟು ಕೋಪ ಮಾಡಿಕೊಂಡು ಹೊರಟುಹೋದದ್ದು ಸರಸೂಗೆ ಎಷ್ಟು ವ್ಯಸನವುಂಟು ಮಾಡಿರಬಹುದು? ಅವಳು ಸ್ತಬ್ಧಳಾಗಿ ಕೂತುಬಿಟ್ಟಳು.

ಅವಳು ಅಡಿಕೆಲೆ ಹಾಕಿಕೊಳ್ಳಲಿಲ್ಲ. ಅವಳು ಯೋಚಿಸಲಾರಂಭಿಸಿದಳು. "ನಾನು ಮಾಡಿದ ತಪ್ಪು ಏನು? ಏತಕ್ಕೆ ಇಷ್ಟು ಕೋಪಿಸಿಕೊಂಡರು?" ಎಂದು. ಆದರೂ ತಾನು ಮಾಡಿದ್ದೆ ತಪ್ಪೆಂತಲೂ, ಈ

ದಿವಸದ ತಪ್ಪು ಕ್ಷಮಿಸಲ್ಪಟ್ಟರೆ, ಮುಂದೆ ಎಂದೂ, ಇಂಥಾ ತಪ್ಪಿಗೆ ಅವಕಾಶ ಕೊಡುವುದಿಲ್ಲವೆಂದೂ, ಬಾರಿಬಾರಿಗೂ ತನ್ನನ್ನೇ ಹಳಿದು ಕೊಂಡಳು. ಹಾಗೇ ಅವಳಿಗೆ ಅಳು ಬಂತು. ಆದರೆ ಸ್ವಲ್ಪ ಹೊತ್ತಿನಲ್ಲಿಯೇ ಅತ್ತಿಗೆಯವರು ಅವಳನ್ನು ಕರೆದರು. ಸರಸು ತಟ್ಟನೆ ಕಣ್ಣೊರೆಸಿಕೊಂಡು ಹೋಗಿ, ' ಏನು ' ಎಂದಳು.

" ಏನೂ ಇಲ್ಲ, ಈ ಕಾಬೂಲ್ ದ್ರಾಕ್ಷಿ ಹಣ್ಣುಗಳನ್ನು ಅನಂತೂಗೂ ಕೊಟ್ಟು ನೀನೂ ತೆಗೆದುಕೋ " ಎಂದು ಅವರು ಹಣ್ಣಿನ ತಟ್ಟೆಯನ್ನು ಕೊಟ್ಟರು. ತಟ್ಟೆಯನ್ನು ತಂದು ಮೇಜಿನಮೇಲಿಟ್ಟಳು. ಅವಳು ಒಂದು ಹಣ್ಣನ್ನೂ ತಿನ್ನಲಿಲ್ಲ. ಅವಳಿಗೆ ಏನು ಕೆಲಸ ಮಾಡಲೂ ಮನಸ್ಸು ಬರಲಿಲ್ಲ. ಹೀಗೆ ೪ ಗಂಟೆಯಾಯಿತು. ಅನಂತೂ ಮನೆಗೆ ಬಂದ.

ಅತ್ತಿಗೆಯವರು ಸರಸುವನ್ನು ಕೂಗಿ " ತಟ್ಟೆ ತೆಗೆದುಕೊಂಡು ಬಾ, ಅನಂತೂಗೆ ಕೊಡುವಿಯಂತೆ ತಿಂಡೀನ " ಎಂದರು.

ಆದರೆ ಸರಸು ಬರುವ ಮೊದಲೇ, ಅನಂತುವೇ ತಟ್ಟೆ ತೆಗೆದು ಕೊಂಡು ಸ್ವಲ್ಪ ತಿಂದ ಶಾಸ್ತ್ರಮಾಡಿ, ತಿರುಗಿ ಹೊರಟುಹೋದ. ಅತ್ತಿಗೆಯವರು ಸರಸುವಿಗೂ ತಿಂಡಿ ಕೊಟ್ಟರು. ಅವಳು ಹೇಗೆ ತಿನ್ನಬಲ್ಲಳು ? ಆದರೆ ಅತ್ತಿಗೆಯವರೇನೆಂದುಕೊಳ್ಳುವರೋ ಎಂದು ಭಯ. ತಿಂಡಿಯ ತಟ್ಟೆಯನ್ನು ತೆಗೆದುಕೊಂಡು ಹೋಗಿ ಪೀರುವಿನಲ್ಲಿಟ್ಟಳು.

೫ ಗಂಟೆಯಾಯಿತು. ಆಗ ಅದೇ ಊರಿನಲ್ಲಿದ್ದ ಅನಂತುವಿನ ಸೋದರತ್ತೆ ಲಕ್ಷ್ಮೀಬಾಯಿಯವರು ಬಂದರು. ಸರಸು ಇನ್ನೂ ಜಡೆ ಹಾಕಿಕೊಂಡಿರಲಿಲ್ಲ. ಮನೆಗೆ ಜನರು ಬಂದಾಗ ಸರಿಯಾಗಿರಬೇಕೆಂದು ಕೊಂಡು, ತಕ್ಷಣ ಎದ್ದು ಮುಖ ತೊಳೆದುಕೊಂಡು ತಲೆಬಾಚಿ ಕೊಂಡಳು. ಆದರೂ ಲಕ್ಷ್ಮೀಬಾಯಿಯು ಇವಳ ಮುಖದಲ್ಲಿನ ಬಡ ಲಾವಣೆಯನ್ನು ಕಂಡುಹಿಡಿದರು.

ಕೇಳಿದಳು, " ಅನಂತು ಎಲ್ಲಿ ? ಇವತ್ತು ರಜಾ ಅಲ್ಲವೇ ? ವಾಕಿಂಗು ಹೋಗುವುದಿಲ್ಲವೇ ? ಅದಕ್ಕೇ ಮುಖ ಸಪ್ಪಗಿದೆ ಅಂತ ಕಾಣುತ್ತೆ "

ಎಂದು ಪ್ರಶ್ನೆಗಳ ಮಳೆಯನ್ನೇ ಕರೆದರು. ಸರಸು ಅದಕ್ಕೆ ಏನು ಉತ್ತರ ಕೊಡಬಲ್ಲಳು ? ಅವಳು ಮಾತಾಡಲಿಲ್ಲ. ಲಕ್ಷ್ಮೀಬಾಯಿಗೆ ಬೇಸರಿಕೆ ಯಾಯಿತು. ಅವರು ಬಂದಾಗಲೆಲ್ಲಾ ಅನಂತು ಮನೆಯಲ್ಲಿರುತ್ತಿದ್ದ. ಅವನೂ ಸರಸೂ ಬೇಕಾದಷ್ಟು ಮಾತನಾಡುತ್ತಿದ್ದರು. ಆದರೆ ಇವತ್ತು ಏನೂ ಇಲ್ಲ. ಅನಂತು ಮನೆಯಲ್ಲಿಲ್ಲ. ಸರಸೂ ಮಾತಿಲ್ಲ. ಆಡಿದರೂ ಬಲವಂತವಾಗಿ ಒಂದೆರಡು, ಅಷ್ಟೆ. ಅವಳ ಮುಖ ಆರು ತಿಂಗಳು ಚಳಿಜ್ವರ ಅನುಭವಿಸುತ್ತಿದ್ದವರಂತಿತ್ತು.

"ಏನು ಸರಸೂ ? ಏಕೆ ಸಪ್ಪಗಿದ್ದೀ ? ಮೈ ಸ್ವಸ್ಥವಿಲ್ಲವೇ ?'

ಸರಸು ತೇಲಿಸಿ ಮಾತನಾಡುತ್ತಾ, "ಸ್ವಸ್ಥವಿಲ್ಲದೇ ಏನು" ಎಂದಳು.

ಅವರು ಸ್ವಲ್ಪ ಹೊತ್ತು ಕೂತಿದ್ದು ಹೊರಟುಹೋದರು. ಸರಸು ಎದ್ದು ಮನೆಕೆಲಸಗಳನ್ನು ಮುಗಿಸಿ, ಅನಂತುವಿಗಾಗಿ ಕಾಯುತ್ತಾ ಕುಳಿತಳು. ಅತ್ತಿಗೆಯವರು ಪುರಾಣಕ್ಕೆ ಹೋಗಿದ್ದರು. ಎಂಟು ಗಂಟೆ ಯಾಯಿತು. ಯಾರೂ ಬರಲಿಲ್ಲ.

ರಾತ್ರಿ ೯ ಗಂಟೆಗೆ ಅನಂತು, ಅತ್ತಿಗೆ ಇಬ್ಬರೂ ಮನೆಗೆ ಬಂದರು. ಅನಂತು ಬಂದವನೇ ಎಲೆ ಹಾಕು ಎಂದ. ಸರಸುವಿಗೆ ಅಷ್ಟಕ್ಕೆ ತೃಪ್ತಿ ಯಾಯಿತು, ಮಾತನಾಡಿದನಲ್ಲಾ ಎಂದು. ೧೧ ಗಂಟೆಯಿಂದ ೮ ಗಂಟೆಯ ವರೆಗೆ ಮಾತನಾಡಿಸದಿದ್ದುದರಿಂದ ಅವಳು ಭೂಮಿಗೆ ಇಳಿದು ಹೋಗಿದ್ದಳು. ಎಲೆ ಹಾಕಿದಳು, ಊಟವಾಯಿತು. ಅನಂತು ರೂಮಿನಲ್ಲಿ ಈಜಿಛೇರ್ ಮೇಲೆ ಕೂತು ಪೇಪರ್ ಓದುತ್ತಿದ್ದ.

ಮಧ್ಯಾಹ್ನ ಮನೆಬಿಟ್ಟು ಸ್ನೇಹಿತ ನಾರಾಯಣರಾಯರ ಮನೆಗೆ ಹೋದ. ಅವರು ಮಲಗಿದ್ದಾರೆಂದು ಉತ್ತರಬಂತು. ಇನ್ನೆಲ್ಲೋ ಹೋದ. ಒಳ್ಳೆಯ ಸ್ನೇಹಿತರು ಯಾರೂ ಸಿಕ್ಕಲಿಲ್ಲ. ಕೊನೆಗೆ ಎಲ್ಲೆಲ್ಲೋ ಮಾತಾಡಿಕೊಂಡು ಒಬ್ಬನೇ ಬರುತ್ತಾ ಇದ್ದ. ದಾರಿಯಲ್ಲಿ ಲಕ್ಷ್ಮೀ ಬಾಯಿ ಎದುರಿಗೆ ಬರುತ್ತಿದ್ದರು. ತನ್ನ ಯೋಜನೆಯಲ್ಲಿ ಅವರನ್ನು ನೋಡಲಿಲ್ಲ. ಅವರೇ ಹತ್ತಿರ ಬಂದು ಮಾತನಾಡಿಸಿದರು:

"ಏನು ಅನಂತೂ, ನೋಡಿದರೂ ಹಾಗೇ ಹೋಗುತ್ತಿದ್ದೀಯಲ್ಲಾ. ಇನ್ನೇನು ದೊಡ್ಡ ಕೆಲಸವಾಯಿತು, ದೊಡ್ಡ ಮನುಷ್ಯನಾದೆ, ನಮ್ಮದೆಲ್ಲಾ ಹೇಗೆ ಜ್ಞಾಪಕವಿರುತ್ತೇ?"

ಅನಂತು ಎಚ್ಚತ್ತ. ಚೇತರಿಸಿಕೊಂಡು "ಇಲ್ಲಾ ಅತ್ತೆ, ಎಲ್ಲೋ ನೋಡಲಿಲ್ಲ, ಅಷ್ಟೆ" ಎಂದ.

ಲಕ್ಷ್ಮೀಬಾಯಿ "ಎಷ್ಟೋ ದಿನದಿಂದ ನೀನು ನಮ್ಮ ಮನೆಗೇ ಬರಲಿಲ್ಲ, ಬಾ" ಎಂದು ಕರೆದುಕೊಂಡು ಹೋದರು. ಅಲ್ಲಿ ಕಾಫಿಯೂ ಆಯ್ತು. ಅನಂತು ಮಂಕಾಗಿಯೇ ಇದ್ದ. ಲಕ್ಷ್ಮೀಬಾಯಿ ಕೇಳಿದರು:

"ಏನು ಅನಂತೂ, ಇವತ್ತು ಇಷ್ಟು ಯೋಚನೆ? ನಿಮ್ಮ ಮನೆಗೆ ಹೋಗಿದ್ದೆ. ನೀನೂ ಇರಲಿಲ್ಲ; ಸರಸೂ ತುಂಬಾ ಸಪ್ಪಗಿದ್ದಳು; ಸರಿಯಾಗಿ ಮಾತಾಡಲಿಲ್ಲ. ಏನು, ಇಬ್ಬರೂ ಸೇರಿ ಆಲೋಚನಾಮಾತ್ರದಿಂದ, ಹಿಮಾಲಯ ಬೆಟ್ಟವನ್ನೇರುವಂತೆ ಕಾಣುತ್ತೆ. ಏಕೆ ಸರಸೂಗೆ ಮೈಯಿ ಸರಿಯಿಲ್ಲವೇ?"

ಅನಂತು ತನ್ನ ಸೋದರತ್ತೆಯೆದುರಿಗೆ ಏನನ್ನೂ ಬಚ್ಚಿಡುತ್ತಿರಲಿಲ್ಲ. ಅವನು ಬೆಳಗಿನಿಂದ ನಡೆದ ವಿಷಯವನ್ನು ಹೇಳಿ ೩ ಗಂಟೆಗೆ ಮನೆ ಬಿಟ್ಟವನು ಇನ್ನೂ ಹೋಗಿಲ್ಲವೆಂದ. ಲಕ್ಷ್ಮೀಬಾಯಿಗೆ ಕೋಪ ಬಂದರೂ ಅವನು ತಪ್ಪನ್ನು ಒಪ್ಪಿಕೊಂಡದ್ದರಿಂದ ಸ್ವಲ್ಪ ಸಮಾಧಾನವಾಯಿತು.

"ಏನು ಅನಂತೂ, ನೀನು ಇಷ್ಟು ವಿದ್ಯಾವಂತನಾಗಿ, ಅವಳು ಮಾಡಿದ ಸಣ್ಣ ತಪ್ಪಿಗೆ ಇಷ್ಟು ನೋಯಿಸಬಾರದು ನೋಡು. ಅವಳಿನ್ನೂ ಚಿಕ್ಕ ಹುಡುಗಿ. ತಾಯಿತಂದೆಗಳನ್ನು ಬಿಟ್ಟುಬಂದು ಸ್ವಲ್ಪ ದಿವಸಗಳಾಗಿವೆ. ಅವಳು ಒಂದುವೇಳೆ ತಪ್ಪುಮಾಡಿದರೂ ಕ್ಷಮಿಸು, ತಿಳಿವಳಿಕೆ ಹೇಳು. ನಾನು ಅವಳ ಪರವಾಗಿ ವಾದಿಸುತ್ತೇನೆಂದು ತಿಳಿಯಬೇಡ. ಅವಳು ಒಂದು ದಿನದಲ್ಲಿಯೇ ಎಷ್ಟು ಸೊರಗಿಹೋಗಿದ್ದಾಳೆಂದು ನಿಮ್ಮ ಗಂಡಸರ ದೃಷ್ಟಿಯಲ್ಲಿ ಕಂಡುಹಿಡಿಯಲಾರಿರಿ" ಎಂದರು ಅವರು.

ಅನಂತು ಪೇಪರು ಮುಚ್ಚಿ ಇದನ್ನೆಲ್ಲಾ ಯೋಚಿಸುತ್ತ ಮಲಗಿದ್ದಾಗ ಸರಸು ಒಳಗೆ ಬಂದಳು. ಬಂದವಳು ಬಾಗಿಲನ್ನು ಹಾಕಿದಳು.

ಹಾಲನ್ನೂ ಅಡಿಕೆ ಎಲೆ ತಟ್ಟೆಯನ್ನೂ ಮೇಜಿನಮೇಲಿಟ್ಟು, ಹಾಲನ್ನು ಬಟ್ಟಲಿಗೆ ಬಗ್ಗಿಸಿದಳು. ಆದರೆ ಅದನ್ನು ಕೊಡುವ ಧೈರ್ಯ ಅವಳಿಗಾಗಲಿಲ್ಲ ಸುಮ್ಮನೆ ನಿಂತಿದ್ದಳು. ಅನಂತೂ ಆಲೋಚನಾತರಂಗಗಳಿಂದ ಈಚೆಗೆ ಬಂದು ಕಣ್ಣುಬಿಟ್ಟು ನೋಡಿದ. ಸರಸು ಅಪರಾಧಿಯಂತೆ ತಲೆ ತಗ್ಗಿಸಿಕೊಂಡು ನಿಂತಿದ್ದಳು. ಅನಂತುವಿನ ಮನಸ್ಸು ಕರಗಿತು. ಅವನು "ಸರಸೂ ಏಕೆ ನಿಂತಿದ್ದೀ? ಹಾಲು ಕೊಡು. ಆರಿ ಹೋಗುವುದಿಲ್ಲವೇ?" ಎಂದು ಹೇಳಿದ.

ಅವಳು ಹಾಲು ತಂದುಕೊಟ್ಟಳು. ಕುಡಿದು "ನೀನೂ ತೆಗೆದುಕೋ" ಎಂದ. ಸುಮ್ಮನಿದ್ದಳು. ಅನಂತು ತಾನೇ ಎದ್ದು ಹಾಲನ್ನು ಬಗ್ಗಿಸಿಕೊಟ್ಟು ಹೇಳಿದ:

"ಏಕೆ ಸರಸೂ, ಹಾಲು ತೆಗೆದುಕೊಳ್ಳುವುದಿಲ್ಲವೇ? ನನ್ನ ಮೇಲೆ ಕೋಪವೇ?"

"ಕೋಪವೇಕೆ?" ಎಂದು ಗದ್ಗದ ಸ್ವರದಿಂದ ಹೇಳಿದಳು. ಬೆಳಗಿನಿಂದ ಅಡ್ಡಿಪಡಿಸಿದ ಕಣ್ಣೀರು ಕಾಲುವೆಯಾಗಿ ಹರಿಯಿತು. ಅನಂತು ಅವಳನ್ನು ಹತ್ತಿರ ಕರೆದುಕೊಂಡು ಹೇಳಿದ:

"ಸರಸು, ನನ್ನದು ತಪ್ಪಾಯಿತು ನೋಡು. ಏನೋ ಕೋಪದಲ್ಲಿ ಹಾಗೆ ಮಾಡಿದೆ. ಮರೆತುಬಿಡು. ನಾನು ತಪ್ಪನ್ನು ಒಪ್ಪಿಕೊಂಡ ಮೇಲೂ ನಿನಗೆ ಕೋಪವೇ?"

ಸರಸು ಸುಮ್ಮನೆ ಅವನ ತೋಳ ಮೇಲೊರಗಿಕೊಂಡಿದ್ದವಳು ಹಾಗೇ ನಿದ್ದೆ ಮಾಡಿದಳು.

. . . . . . .

ಸಾಯಂಕಾಲ ಅನಂತು ಆಫೀಸಿನಿಂದ ಬರುವ ಹೊತ್ತು. ಸರಸು ವಾಂಗೀಭಾತು, ಕಾಫಿ, ಮಾಡಿಟ್ಟು ಜಡೆ ಹಾಕಿಕೊಳ್ಳುತ್ತಾ ಗಡಿಯಾರದ ಕಡೆ ನೋಡಿದಳು. ೫॥ ಗಂಟೆ. ಏಕೆ ಇನ್ನೂ ಬರಲಿಲ್ಲ? ನಿತ್ಯ ೫ ಗಂಟೆಗೆ ಬರುತ್ತಿದ್ದರಲ್ಲಾ, ಎಂದುಕೊಳ್ಳುತ್ತಾ ತಿಂಡಿಯನ್ನು ತಟ್ಟೆಗೆ ಹಾಕಿ ಮೇಜಿನ ಮೇಲಿಟ್ಟು, ಇನ್ನೊಂದು ತಟ್ಟೆಯನ್ನು ಮುಚ್ಚಿಟ್ಟಳು. ಅನಂತು ಮನೆಗೆ ಬರಲಿಲ್ಲ. ಅಷ್ಟರಲ್ಲಿ ಅತ್ತಿಗೆಯವರು ಕೂಗಿದಂತಾಯಿತು. ಸರಸು ಒಳಗೆ ಹೋಗಿ 'ಏನು' ಎಂದಳು.

ಆ ಪೇ ಇ ನ್ನೊ ವ್ಯ ಯಾ ಗ ಲಿ

ರಂಗವಲ್ಲಿ "ಅನಂತೂ ಬರಲಿಲ್ಲವೇ?" ಎಂದರು. ಸರಸೂ, 'ಇಲ್ಲ' ಎಂದಳು. "ನನಗೆ ಕಾಲು ತುಂಬಾ ನೋವು. ೩ ದಿನದಿಂದ ಹೇಳಿದರೂ ಔಷಧ ತರಲಿಲ್ಲ. ನನಗೆ ಖಾಯಿಲೆ ಬಂದರೆ ಯಾರಿಗೆ ಏನು?" ಎಂದು ನರಳಲಾರಂಭಿಸಿದರು.

ಸರಸುವಿಗೆ ಪತಿನಿಂದೆಯನ್ನು ಕೇಳಿ ಕೋಪ ಬಂತು. ಅನಂತೂಗೆ ಆಸ್ಪತ್ರೆಗೆ ಹೋಗುವುದಕ್ಕೆ ಯಾವಾಗ ಬಿಡುವು? ಬೆಳಗಿನಲ್ಲಿ ಆಫೀಸಿನ ಕಾಗದಪತ್ರಗಳನ್ನು ನೋಡುತ್ತಿರುವನು. ೧೦ ಗಂಟೆಗೆ ಆಫೀಸಿಗೆ ಹೋದರೆ, ಮನೆಗೆ ಬರಲು ೫ ಗಂಟೆಯಾಗುವುದು. ಒಂದು ವೇಳೆ ತಂದರೆ, "ಆಸ್ಪತ್ರೆಯ ಔಷಧ ನನಗೇಕೆ?" ಎಂದು ಅವರು ತೆಗೆದು ಕೊಳ್ಳುತ್ತಿರಲಿಲ್ಲ. ಹೀಗಿದ್ದೂ ಔಷಧ ತರಲಿಲ್ಲವೆಂದು ಹೇಳುವರಲ್ಲಾ ಎಂದು ಕೋಪ ಬಂತು. ಇಷ್ಟು ಹೊತ್ತಿಗೆ ಅನಂತು ಮನೆಗೆ ಬಂದ. ಬಂದವನು, ಅಕ್ಕನನ್ನು ಕುರಿತು, "ಏನಕ್ಕಾ, ಇವತ್ತು ಕಾಲು ನೋವು ಹೇಗಿದೆ" ಎಂದ.

ಅದಕ್ಕವರು, "ಏನೋ ಹಾಗೇ ಇದೆ. ಹೋಗುವುದಕ್ಕೆ ಔಷಧಿ ತಂದು ಕೊಟ್ಟವರಾರು? ಹಚ್ಚಿದವರಾರು? ನನ್ನಂತಹವಳಿಗೆ ಬಂದರೆ ಯಾರು ವಿಚಾರಿಸುತ್ತಾರೆ?" ಎಂದು ದೊಡ್ಡ ಉಪನ್ಯಾಸ ಮಾಡಿ ಮುಖ ತಿರುಗಿಸಿಕೊಂಡರು.

ಅನಂತುಗೆ ಬೇಜಾರಾಯಿತು. ಬೆಳಗಿನಿಂದ ಕೆಲಸಮಾಡಿ ಆಯಾಸ ಪಟ್ಟು ಮನೆಗೆ ಬಂದ ತಕ್ಷಣ ಹೀಗೆ ಹೇಳಿದರೆ, ಯಾರಿಗೆ ಬೇಜಾರಾಗುವುದಿಲ್ಲ? ಅವನು ಸ್ವಲ್ಪಹೊತ್ತು ನಿಂತಿದ್ದು, ಹಾಗೇ ಎಲ್ಲಿಯೋ ಹೊರಟುಹೋದ.

ಸರಸು ಪತಿಯು ಮನೆಗೆ ಬಂದನೆಂದು ಸಡಗರದಲ್ಲಿ, ಕಾಫಿ ಬೆರಸುವುದಕ್ಕೆಂದು ಒಳಗೆ ಹೋಗಿದ್ದಳು. ಅವನು ನಿತ್ಯ ಮನೆಗೆ ಬಂದು, ಸ್ವಲ್ಪ ಸುಧಾರಿಸಿಕೊಂಡನಂತರ ಬಟ್ಟೆ ತೆಗೆದು, ತಿಂಡಿ ತಿನ್ನುವ ಪದ್ಧತಿ. ಹಾಗೆಯೇ ಎಂದು ಸುಮ್ಮನಿದ್ದಳು. ಆದರೆ ಅನಂತುವಿನ ಸುಳುವೇ ಇಲ್ಲ. ಮುಖ ತೊಳೆದುಕೊಳ್ಳುತ್ತಿರಬಹುದೆಂದು ಬಚ್ಚಲ ಮನೆಗೆ

ಹೋಗಿ ನೋಡಿದಳು. ರೂಮಿನಲ್ಲಿ ನೋಡಿದಳು, ಬಟ್ಟೆ ಬಿಚ್ಚಿದಂತೆ ಕಾಣಲಿಲ್ಲ. ಮನೆಯಲ್ಲಿ ಎಲ್ಲಿಯೂ ಇಲ್ಲ. ಸರಸುವಿಗೆ ಗಾಬರಿಯಾ ಯಿತು ಎಲ್ಲಿ ಹೋದನೆಂದು. ಅತ್ತಿಗೆಯವರು:

"ನಾನು ಕಾಲು ನೋವು, ಔಷಧಿ ತರಲಿಲ್ಲಾ ಎಂದೆ, ಅಷ್ಟಕ್ಕೇ ಕೋಪ ಬಂತೇನೋ? ಎಲ್ಲಿಗೋ ಹೊರಟುಹೋದ" ಎಂದರು.

ಸರಸು ಈಗ ಏನು ಮಾಡುವುದು? ಅವನನ್ನು ಹುಡುಕಿತರಲು ಸಾಧ್ಯವೇ? ಹಾಗೇ ಎದುರುನೋಡುತ್ತಾ ಕುಳಿತಳು. ಆರು ಗಂಟೆ ಹೊಡೆಯಿತು. ಇಷ್ಟು ಹೊತ್ತಿನಮೇಲೆ ಬಂದರೂ ತಿಂಡಿ ತಿನ್ನುವುದಿಲ್ಲ. ಹೋಗಲಿ, ಬೇಗ ಅಡಿಗೆ ಮಾಡೋಣ ಎಂದುಕೊಂಡು, ತಿಂಡಿಯನ್ನು ಪಾತ್ರೆಗೆ ಹಾಕಿ ಮುಚ್ಚಿಟ್ಟು, ಅಡಿಗೆ ಮಾಡಿದಳು. ಅಡಿಗೆಯಾಯಿತು ಹಾಸಿಗೆ ಹಾಕಿ, ಅನಂತುಗೆ ಕಾಯುತ್ತಾ ಕುಳಿತಳು.

"ಅವನಿಗೆ ಏನು ಕೆಲಸವೋ ಏನೋ. ಎಲ್ಲಿಯೋ ಹೋಗಿರ ಬಹುದು. ನೀನು ತಿಂಡಿ ತಿನ್ನು. ಏಕೆ ಉಪವಾಸವಿದ್ದೀಯೆ?" ಎಂದು ಅತ್ತಿಗೆಯವರು ಹೇಳಿದರು.

ಆದರೆ ಅವಳು ತಿನ್ನಲಿಲ್ಲ. ಹಾಗೇ ಕಾಯುತ್ತಾ ಕುಳಿತಳು. ಅನಂತು ೯।।। ಗಂಟೆಗೆ ಮಲ್ಲಿಗೆ ಹೂವಿನ ಕುಚ್ಚನ್ನು ತೂಗಾಡಿಸುತ್ತಾ ಬಂದ. ಬಂದವನು ಜೇಬಿನಿಂದ ಒಂದು ಪೊಟ್ಟಣ ಔಷಧವನ್ನು ತೆಗೆದು,

"ಸರಸೂ, ಈ ಔಷಧವನ್ನು ಮೊದಲು ಅಕ್ಕನಿಗೆ ಕೊಟ್ಟು ಆಮೇಲೆ ಎಲೆ ಹಾಕು" ಎಂದ.

ಅವಳಿಗೆ ಹೂ ನೋಡಿದಾಗಿನಿಂದ ತುಂಬಾ ಸಂತೋಷ. ಹೂ ತರ ಬೇಕಾದರೆ ಅವನ ಮನಸ್ಸು ಸರಿಯಾಗಿರಬೇಕೆಂದು ಗೊತ್ತು.

ಅನಂತು ಊಟಮಾಡಿ ಹೊರಗೆ ಬಂದ. ಆಗ ಅಕ್ಕ "ಏಕೆ ಅನಂತೂ ಇಷ್ಟು ಹೊತ್ತು? ನೀನು ಆಫೀಸಿಂದ ಬರುವ ಹೊತ್ತಿಗೆ ತಿಂಡಿ ಮಾಡಿಟ್ಟು ಸರಸೂ ಕಾದುಕೊಂಡಿದ್ದಳು. ನೀನು ಹಾಗೇ ಹೊರಟು ಹೋದಿ. ಅವಳೂ ಬೆಳಿಗ್ಗೆ ಊಟಮಾಡಿದ್ದು. ಇದುವರೆಗೂ ಉಪವಾಸ ವಿದ್ದಳು. ನಾನು ತಿಂಡಿ ತಿನ್ನು ಅಂತ ಹೇಳಿದೆ. ತಿಂದ ಹಾಗೆ ಕಾಣಲಿಲ್ಲ"

ಅದೇ ಇನ್ನೊಮ್ಮೆ ಯಾಗಲಿ

ಎಂದರು. ಅನಂತು ಸುಮ್ಮನೆ ರೂಮಿನೊಳಗೆ ಹೋದ. ಅಷ್ಟು ಹೊತ್ತಿಗೆ ಸರಸುವೂ ಊಟಮುಗಿಸಿ ಹೋದಳು.

ಅನಂತು "ಏಕೆ ಉಪವಾಸವಿದ್ದೀ ?" ಎಂದ.

"ಉಪವಾಸವೆಲ್ಲಿ ? ಊಟಮಾಡಿದೆನಲ್ಲಾ" ಎಂದಳು.

"ಈಗ ಊಟಮಾಡಿದಿ, ಅದು ಗೊತ್ತು. ಮುಂಚೆ ಏಕೆ ಉಪವಾಸ ಇದ್ದಿ ? ನೋಡು ಸರಸೂ, ಹೀಗೆಲ್ಲಾ ಮಾಡಬೇಡ. ನನಗೆ ಹೊರಗೆ ಹೋದರೆ ನೂರೆಂಟು ಕೆಲಸ. ಆಗ ನಾನು ಹೊರಗೆ ಹೋದೆನಲ್ಲಾ, ಅಷ್ಟು ಹೊತ್ತಿಗೆ ಸರಿಯಾಗಿ ನನಗೆ ಹಿಂದೆ ಪ್ರೊಫೆಸರ್ ಆಗಿದ್ದ ಮಾಧವ ರಾಯರು ಬಂದಿದ್ದಾರೆಂದು ತಿಳಿಯಿತು. ಅವರನ್ನು ನೋಡಿಕೊಂಡು ಬರೋಣ ಎಂತ ಹೋದೆ. ಅಲ್ಲಿ ಟೀ ತಿಂಡಿ ಎಲ್ಲಾ ಆಯ್ತು. ಅಷ್ಟು ಹೊತ್ತಿಗೆ ಸ್ಕೌಟು ಮಾಸ್ಟರ್ ಶ್ರೀನಿವಾಸರಾವ್ ಬಂದು 'ಈ ರಾತ್ರಿ ಬಾನ್‌ಫೈರ್ ಆಗುತ್ತೆ. ನೀವೆಲ್ಲಾ ಬರಬೇಕು' ಎಂದರು. ಮಾಧವ ರಾಯರು ನನ್ನನ್ನು 'ಬಾರಯ್ಯಾ, ಬರುತ್ತೀಯೋ ಅಥವಾ ಮನೆಯಲ್ಲಿ ಆರ್ಡರಾಗಿಲ್ಲವೋ ?' ಎಂದರು. ನಾನು ಏನು ಹೇಳಲಿ ಹೇಳು. ಅಂತೂ ಅದೆಲ್ಲಾ ಮುಗಿಸಿಕೊಂಡು ಬರುವ ಹೊತ್ತಿಗೆ ಇಷ್ಟು ಹೊತ್ತಾಯ್ತು. ಅವರು ನಿನ್ನ ವಿಷಯವನ್ನೂ ಕೇಳಿದರು. ನಿಮ್ಮ ತಂದೆಯವರ ಸ್ನೇಹಿತರಂತೆ.

"ಯಾರು ? ಯಾವ ಮಾಧವರಾಯರು ?"

"ಡಿ. ಮಾಧವರಾಯರು ಕಣೇ, ನಿನಗೆ ಗೊತ್ತಿಲ್ಲವೇ ?"

"ಗೊತ್ತು ಗೊತ್ತು. ಅವರ ಮಗಳು ಮಾಲತಿ, ನಾನು S. S.-L. C. ಕ್ಲಾಸಿನಲ್ಲಿ ಒಟ್ಟಿಗೆ ಓದುತ್ತಿದ್ದೆವು."

"ನೋಡಿದೆಯಾ, ಸರಿ. ಇದುವರೆಗೆ ನಡೆದ ವಿಷಯವನ್ನೆಲ್ಲಾ ತಿಳಿಸಿದ್ದೇನೆ. ಇನ್ನು ಆಕ್ಷೇಪಣೆ ಮಾಡಿದರೆ ನಾನು ಸುಮ್ಮನಿರು ವುದಿಲ್ಲ . . . . ಹೋಗಲಿ, ಹೂತೆಗೆದಿಟ್ಟೆಯಾ ?"

"ಹೂ ತೆಗೆದಿಡುತ್ತಾ ಇದ್ದೆ. ಕೂಗಿದಿರಲ್ಲಾ ಎಂತ ಒಳಗೆ ಬಂದೆ. ಈಗ ತೆಗೆದಿಡುವುದಕ್ಕೆ ಹೋಗುತ್ತೇನೆ" ಎಂದು ಹೋದಳು.

ಅನಂತು ಪೇಪರು ಓದುತ್ತಾ ಇದ್ದ. ಸ್ವಲ್ಪ ಹೊತ್ತಿನ ಮೇಲೆ ಸರಸು, ಹೆಜ್ಜೆಯ ಮೇಲೆ ಹೆಜ್ಜೆಯಿಡುತ್ತಾ, ಒಳಗೆ ಬಂದು ಬಾಗಿಲು ಹಾಕಿ ಹತ್ತಿರ ಹೋದಳು. ಪೇಪರು ಅಡ್ಡವಾಗಿದ್ದುದರಿಂದ, ಅನಂತು ಅವಳನ್ನು ನೋಡಲಿಲ್ಲ. ಅವಳು ಮೆಲ್ಲಗೆ ಹತ್ತಿರ ಬಂದು ಹಾರಹಾಕಿ, ಚಪ್ಪಾಳೆ ತಟ್ಟಿದಳು. ಅನಂತು ಚಕಿತನಾಗಿ "ಏನು ಸರಸೂ!" ಎಂದ.

"ಏನೂ ಇಲ್ಲ. ಆಗಲೇ ಹೇಳಿದಿರಲ್ಲಾ ಒಂದು ದೊಡ್ಡ ಉಪನ್ಯಾಸ; ಅದಾದ ಮೇಲೆ ಉಪನ್ಯಾಸ ಮಾಡಿದವರಿಗೆ ಹಾರಹಾಕಿ ಚಪ್ಪಾಳೆ ತಟ್ಟಬೇಡವೇ? ಅಷ್ಟೇ" ಎಂದಳು. ಅನಂತು "ನೀನು ತುಂಬಾ ಹೆಚ್ಚಿಕೊಂಡಿದ್ದೀ" ಎಂದ. "ಹೆಚ್ಚಿಸಿದವರು ಯಾರು?" ಎಂದಳು ಸರಸು. "ಹೌದು, ತಪ್ಪು ನನ್ನ ಮೇಲೆ ಹಾಕುತ್ತೀಯಾ? ಬಾ ಇಲ್ಲಿ ಶಿಕ್ಷೆ ಮಾಡುತ್ತೇನೆ" ಎಂದ ಅನಂತು.

ಸರಸು ಹತ್ತಿರ ಬಂದು ಒರಗಿಕೊಂಡು, "ಏನು ಶಿಕ್ಷೆ ಮಾಡುತ್ತೀರೋ ಆಗಲಿ, ಸಿದ್ಧವಾಗಿದೇನೆ" ಎಂದು ಮುಗುಳುನಗೆ ನಗುತ್ತಾ ಹೇಳಿದಳು.

. . . . . . .

ಇಷ್ಟರಲ್ಲಿ ಯಾರೋ 'ಸರಸಾ' ಎಂದು ಕೂಗಿದ ಹಾಗಾಯಿತು. ಸರಸು ಗಾಬರಿಯಾಗೆದ್ದು ನೋಡಿದಳು. ಏನು ನೋಡಿದಳು? ಪಕ್ಕದಲ್ಲಿ ಮಲಗಿದ್ದ ನಾಲ್ಕು ವರ್ಷದ ಕಮಲು ಅಳುತ್ತಿತ್ತು. ಸರಸು ಎದ್ದು ಕುಳಿತು ಕಮಲುವನ್ನು ಸಮಾಧಾನ ಮಾಡಿದಳು.

ಸರಸು ವಿಧವೆಯಾಗಿ ಮೂರು ವರ್ಷಗಳಾಗಿತ್ತು. ಹಿಂದಿನ ದಿನ ಅವಳು ಸಮಾಜದ ಕೆಲಸದಲ್ಲಿ ಉತ್ತಮ ತರದ ಕಾರ್ಯವನ್ನು ಮಾಡಿದ್ದಕ್ಕೆ ಮೆಚ್ಚಿ, ವಾರ್ಷಿಕೋತ್ಸವದಲ್ಲಿ ಅವಳ ಮುಖ್ಯ ಉಪಾಧ್ಯಾಯಿನಿಯವರು, ಆ ವರ್ಷದ ಮೆಡಲನ್ನು ಅವಳಿಗೆ ಕೊಟ್ಟು "ನಿನ್ನಿಂದ ನಮ್ಮ ಸೇವಾಸಮಾಜಕ್ಕೆ ಒಳ್ಳೆಯ ಹೆಸರು ಬಂತು. ನೀನು ಮುಂದೆ ದೇಶಹಿತದ ಕಾರ್ಯಗಳನ್ನು ಕೈಗೊಂಡು ನಮಗೆ ಸಹಾಯ ಮಾಡಬೇಕು" ಎಂದು ಹೇಳಿದ್ದರು.

ಅವಳು ಮೆಡಲನ್ನು ತೆಗೆದುಕೊಂಡು ಮನೆಗೆ ಬಂದಳು. ಬಂದು ಏನು ಮಾಡಬೇಕು? ಯಾರಿಗೆ ತೋರಿಸಬೇಕು? ಅವಳು ನಿತ್ಯವೂ ಪೂಜಿ

ಅವೇ ಇನ್ನೊಮ್ಮೆ ಯಾಗಲಿ

ಸುತ್ತಿದ್ದ ಪತಿಯ ಫೋಟೋ ಬಳಿಗೆ ಹೋಗಿ ಅದನ್ನಿಟ್ಟು, ತನಗೆ ಮೊದಲು ಬಂತೆಂದು ಹೇಳಿದಳು.

ಫೋಟೋ ನೋಡುವುದೇ ? ಕೇಳುವುದೇ ? ಎಂದು ಯಾರಾದರೂ ಕೇಳಬಹುದು. ಆದರೆ ಅವಳಿಗೆ ಆ ರೀತಿ ತೋರುತ್ತಿರಲಿಲ್ಲ. ಯಾವ ವಿಷಯ ಗೊತ್ತಾಗದಿದ್ದರೂ, ಅವಳು ಅದೇ ರೀತಿ ಫೋಟೋ ಬಳಿ ನಿಂತು ಯೋಚಿಸಿ ಗೊತ್ತುಮಾಡಿಕೊಳ್ಳುವಳು.

ಇಂದು ಮಲಗುವಾಗ ಅವಳಿಗೆ ಹಿಂದಿನ ಸುಖಗಳು ನೆನವಾಗಿ, ಒಂದೊಂದೇ ಯೋಚಿಸುತ್ತಾ ಸ್ವಪ್ನ ಸೃಷ್ಟಿಯಲ್ಲಿ ತೇಲಾಡಲಾರಂಭಿಸಿದಳು. ಮಗುವು ಅತ್ತುದರಿಂದ, ಅವಳಿಗೆ ಎಚ್ಚರವಾಗಿ ಇದುವರೆಗೆ ತಾನು ನೋಡಿದ್ದೆಲ್ಲವೂ ಸ್ವಪ್ನ ಮಾತ್ರವೇ ಎಂದು ತಿಳಿಯಿತು. ಅವಳು ಚಿಂತಿತಳಾಗಿ, ಅದೇ ಸ್ವಪ್ನವೇ ಇನ್ನೊಮ್ಮೆಯಾದರೂ ಬೀಳಲೆಂದು ಯೋಚಿಸುತ್ತಾ ನಿದ್ರೆಮಾಡಿದಳು.

---

# ಅವಳ ಬಾಳು

ಎರಡು ಕನ್ನಡ ಜೀವಗಳು ದೂರದ ನಾಡಿನಲ್ಲಿ ಸೇರಲು ಎರಡೂ ಹೃದಯಗಳೂ ಉಕ್ಕಿಬಂದವು. ಅವಳು ತನ್ನ ಹಾಡನ್ನು ಹಾಡಿದಳು : ‘ ಜನ್ಮಲಿಯಾ ಮೈನೇ ಆಸೂ ಮೇ। ಆಸೂ ಹಿ ಮೇರೆ ಜೀವನ ಮೇ। ಮೈ ಪಗಲೀ ಬಿಖೇರತೀ ಫಿರತೀ। ಆಸೂಹಿ ವನ–ವನ ಉಪವನ ಮೇ। ’

ಕತೆಗಾರ್ತಿ

## ಶ್ರೀಮತಿ ಪದ್ಮಾವತಿ

ಇವರು ಬಾಗಿಲುಕೋಟೆಯ ಮಹಿಳೆ. ಈಗ ವರ್ಧಾ ಮಹಿಳಾಶ್ರಮದಲ್ಲಿರುತ್ತಾರೆ. ಆಶ್ರಮಕ್ಕೆ ಹೋಗುವ ಪೂರ್ವದಲ್ಲಿ ೨-೩ ಕತೆಗಳನ್ನು ಬರೆದಿದ್ದರು. ಇತ್ತೀಚೆಗೆ ರೂಢಿ ತಪ್ಪಿದ್ದುದರಿಂದ ಬರವಣಿಗೆಯಲ್ಲಿ ಪ್ರಗತಿಯಾಗಿರದಿದ್ದರೂ ಇದರಲ್ಲಿ 'ಅವಳ' ಕರುಣ ಕಥೆಯನ್ನು ತಕ್ಕಮಟ್ಟಿಗೆ ಚೆನ್ನಾಗಿಯೆ ಹೇಳಿದ್ದಾರೆ. ಈಗಲವರು ಹಿಂದಿಯನ್ನು ಚೆನ್ನಾಗಿ ಕಲಿತು, ಕಾವ್ಯರೂಪದ ಕೆಲವು ಪುಡಿಗತೆಗಳನ್ನು ಕೂಡ ಬರೆದಿದ್ದಾರೆ. ಈ ಕನ್ನಡ ಕತೆಯಲ್ಲಿ ಕುಸುರಿನ ಕೆಲಸಕ್ಕಿಂತ ಸಮಾಜದಲ್ಲಿಯ ಅನ್ಯಾಯಗಳ ಸ್ಪಷ್ಟನಿಷೇಧವು ಇವರ ಶೈಲಿಯ ಗುಣವಾಗಿದೆ.

ಅವಳಂತಹ ಸುಂದರಿ ಅವಳೇ. ಅವಳಂತಹ ಸುಶೀಲೆ, ಸದ್ಗುಣಿ ಅವಳೇ. ಆದರೆ ಅವಳ ಬಾಳನ್ನು ನೆನೆದಾಗಲೆಲ್ಲಾ ಕಣ್ಣೀರುಗಳು ಕರೆದಂತೆ ಬಂದೇಬಿಡುತ್ತವೆ.

. . . . . . .

ನಾನೋರ್ವ ಕನ್ನಡಿತಿ. ನಾಸಿರುವದು ಮಧ್ಯಭಾರತದ ಒಂದು ಆಶ್ರಮದಲ್ಲಿ; ವಿದ್ಯಾಭ್ಯಾಸಕ್ಕಾಗಿ ಈಗ ಎರಡು ವರುಷದಿಂದ ಇಲ್ಲಿರುವೆ.

೧೭೫ ಇಲ್ಲಿ ನಾರಕ್ಕೊಮ್ಮೆ ಒಂದೊಂದು ಕಡೆ 'ಸಫರಿ'ಗೆ ಹೋಗುವದು
ಗ
ವ ನನ್ನ ವಾಡಿಕೆ. ಒಂದು ಭಾನುವಾರ ಆಶ್ರಮದಿಂದ ಪಶ್ಚಿಮಕ್ಕೆ ಮೂರು
ಲಿ ಮೈಲು ದೂರವಿರುವ 'ಗಡ'ಕ್ಕೆ ಹೋಗುವದೆಂದು ಗೊತ್ತಾಯಿತು.

ಗಡವು ಚಿಕ್ಕಹಳ್ಳಿ. ಅದು ಗೋಬ್ರಾಹ್ಮಣಪ್ರತಿಪಾಲಕರಾದ ಶ್ರೀ ಶಿವಾಜಿ ಮಹಾರಾಜರ ಗುರುವಾದ ಶ್ರೀ ಸಮರ್ಥರ ತಪಸ್ಸಿನ ಸ್ಥಾನವೆಂದು ಅಲ್ಲಿಯ ಜನರ ಹೇಳಿಕೆ. ಅಲ್ಲಿ ಒಂದೇ ಒಂದು ಬ್ರಾಹ್ಮಣರ ಮನೆಯಿದೆ. ಉಳಿದವರೆಲ್ಲಾ ಅನ್ಯಜಾತಿಯವರು. ಅದರಲ್ಲಿಯೂ ಹರಿಜನರೇ ಹೆಚ್ಚು. ಊರಲ್ಲ ಶ್ರೀಸಮರ್ಥ ರಾಮದಾಸ ಸ್ವಾಮಿಗಳ ಮಂದಿರ ಏದೆ. ಸಮರ್ಥರ ಮೂರ್ತಿ ಬಿಳೀ ಸಂಗಮರವರೀ ಕಲ್ಲಿನದು. ಅಂತಹ ಸುಂದರ ಮೂರ್ತಿಯನ್ನು ನಾನಿದುವರೆಗೂ ನೋಡಿರಲಿಲ್ಲ. ತಲೆಯ ಮೇಲೆ ಜಡೆ, ಉದ್ದವಾದ ಗಡ್ಡ, ಕೈಯಲ್ಲಿಯ ಕಮಂಡಲು, ಅರೆಮುಚ್ಚಿದ ಕಣ್ಣು, ಇವೆಲ್ಲ ಆ ಶಿಲ್ಪಿಗೆ ಕಲೆಯು ಕರತಲಾಮಲಕವಾಗಿರುವದೆಂದು ಸಾರುವಂತಿದ್ದವು. ಗುಡಿಯ ಮುಂದೊಂದು ಭಾವಿಯಿದೆ, ಯಾವ ಜಾತಿಯವರಿಗೂ ಅದನ್ನು ಮುಟ್ಟಲು ಅಡ್ಡಿಯಿಲ್ಲ.

ಗುಡಿಯ ಕಟ್ಟೆಯಮೇಲೆ ಒಬ್ಬ ಮುದುಕ ಕುಳಿತಿದ್ದನು. ೧೯೨೦ ನೇ ಇಸ್ವಿಗಿಂತ ಮುಂಚೆ ಇಲ್ಲಿ ಬರೇ ಅಡವಿಯಿತ್ತೆಂತಲೂ ಜನವಸತಿ ಇದ್ದಿಲ್ಲವೆಂತಲೂ ಆ ವರ್ಷವೇ ಒಬ್ಬ ಮಹಂತರು ಬಂದು ಇಲ್ಲಿ ಇರತೊಡಗಿದರೆಂತಲೂ ಅವರೇ ಮುಂದೆ ಇಲ್ಲಿಯ ಅಡವಿಯನ್ನೆಲ್ಲ ಕಡಿಸಿ ಈ ಚಿಕ್ಕ ಗುಡಿಯನ್ನು ಸ್ಥಾಪಿಸಿ ಆ ಬಾವಿಯನ್ನು ಅಗಿಸಿದರೆಂತಲೂ ಮುಂದೆ ಸ್ವಲ್ಪ ದಿವಸದಲ್ಲಿಯೇ ಜನರು ಬಂದು ಇರತೊಡಗಿದರೆಂತಲೂ ಅವನು ಹೇಳಿದನು.

ನಾನು "ಮಹಂತರ ಮನೆಯೆಲ್ಲಿ?" ಎಂದು ಕೇಳಿದೆ.

"ಅವರ ಮನೆಯು ಇಲ್ಲಿಯೇ ಸಮೀಪದಲ್ಲಿದೆ. ಆದರೆ ಅವರು ಮನೆಯಲ್ಲಿರುವದಿಲ್ಲ" ಎಂದು ಮುದುಕ ಹೇಳಿದನು.

"ಹಾಗಾದರೆ ಅವರಿರುವದೆಲ್ಲಿ?"

"ಅವರು ಈಗಿನಂಥ ಮಹಂತರಲ್ಲ; ಒಳ್ಳೇ ತಪಸ್ವಿಗಳು. ಅವರು ಮನೆಯಲ್ಲಿರುವದಿಲ್ಲ; ಗುಡ್ಡದಮೇಲೆ ಒಂದು ಚಪ್ಪರಹಾಕಿಕೊಂಡು
೧೧೮ ಇರುತ್ತಾರೆ" ಎಂದು ಆ ಮುದಕ ಒಳ್ಳೇ ಅಭಿಮಾನದಿಂದ ನುಡಿದ.

ನಾವೆಲ್ಲ ಬಾವಿಕಟ್ಟೆಯ ಮೇಲೆ ದಣುವಾರಿಸಿಕೊಂಡು ಗುಡ್ಡವನ್ನೇರಿದೆವು. ಗುಡ್ಡದ ಮೇಲಿನ ದೃಶ್ಯವು ಅತ್ಯಂತ ರಮಣೀಯವಾಗಿತ್ತು. ಎಡಕ್ಕೆ ಹನುಮನ ಗುಡಿ, ಬಲಕ್ಕೆ ಮಹಂತರ ಚಪ್ಪರ. ನಾನಾತರದ ಹೂಗಿಡಗಳು, ಗಗನಚುಂಬಿತ ವೃಕ್ಷಗಳು ನೋಡುವವರ ಚಿತ್ತಾಕರ್ಷಣ ಮಾಡುತ್ತಿದ್ದವು. ಆಶ್ವೀನಮಾಸವಿದ್ದುದರಿಂದ ಅಲ್ಲಲ್ಲಿ ಪಚ್ಚೆ ಹಸರು ಮುರಿಯುತ್ತಿತ್ತು. ಅಲ್ಲಿಯ ದೃಶ್ಯವನ್ನು ನೋಡಿದ ಕೂಡಲೇ ನಮ್ಮೆಲ್ಲರ ದಣಿವು ತನ್ನಷ್ಟಕ್ಕೆ ತಾನೇ ಕಡಿಮೆಯಾಯಿತು. ನಮ್ಮ ಹಿಗ್ಗು ಹೃದಯದಲ್ಲಿ ಹಿಡಿಸಲಾರದೆ, ಧ್ವನಿಯ ರೂಪದಿಂದ ಹೊರಹೊರಡ ತೊಡಗಿತು. ನಮ್ಮ ಕೋಲಾಹಲವನ್ನು ಕೇಳಿ ಮಹಂತರು ಇದೇನೆಂದು ಹೊರಗೆ ಬಂದರು.

ಮಹಂತರನ್ನು ನೋಡಿದ ಕೂಡಲೇ ನಾನು ತಲೆಬಾಗಿ ನಮಸ್ಕರಿಸಿದೆ. ತ್ಯಾಗಭೂಮಿಯ ಸಂಪಾದಕರೂ ನಮಸ್ಕರಿಸಿದರು. ಉಳಿದವರು "ಒಳ್ಳೇ ಭಕ್ತ ಜನರು" ಎಂದು ಹಾಸ್ಯಮಾಡಿ ಅತ್ತಿತ್ತ ತಿರುಗಾಡಲಿಕ್ಕೆ ಹೊರಟುಹೋದರು. ನಾನು ಮತ್ತು ತ್ಯಾಗಭೂಮಿಯ ಸಂಪಾದಕರು ಮಹಂತರ ಹತ್ತರವೇ ಕುಳಿತುಕೊಂಡೆವು. ದೇಶದ ಆಂದೋಲನ, ಮಹಾತ್ಮರು ಮತ್ತು ಹರಿಜನರ ವಿಷಯಕ್ಕೇನೇ ಕೆಲಹೊತ್ತು ಮಾತನಾಡುತ್ತ ಕುಳಿತೆವು. ಅಷ್ಟರಲ್ಲಿ ವಾಣಿಯ ವೀಣೆಯ ಸ್ವರವನ್ನು ಕೂಡ ನಾಚಿಸುವಂತಹ ಸ್ವರವೊಂದು ಕೇಳಬಂತು. ನಾನು ಬೆಚ್ಚಿಬಿದ್ದು "ಇದೇನು!" ಎಂದು ಕೇಳಿದೆ.

"ಇಲ್ಲಿಯೇ ಪಕ್ಕದ ಗುಡಿಸಲಿನಲ್ಲಿ ನಮ್ಮ ಲಕ್ಷ್ಮಿ ವೀಣೆ ನುಡಿಸುತ್ತಾಳೆ" ಎಂದು ಮಹಂತರೆಂದರು.

ನಾನಂದೆ: "ಲಕ್ಷ್ಮಿ ಯಾರು? ತಮ್ಮ ಮಗಳೋ?"

"ಹಃ, ಮಗಳೇ ಸರಿ" ಎಂದು ಉದಾಸೀನತೆಯಿಂದ ಮಹಂತರು ಮಾರ್ನುಡಿದರು.

ಅವರ ಮಾತು ನನಗೆ ಒಗಟದಂತೆ ತೋರಿತು. ಆಶ್ಚರ್ಯದಿಂದ ನಾನು "ಹಾಗೆಂದರೇನು, ಲಕ್ಷ್ಮಿ ತಮ್ಮ ಮಗಳಲ್ಲವೇ?" ಎಂದು ಸ್ವಲ್ಪ ಸಲಿಗೆಯಿಂದ ಕೇಳಿದೆ.

"ಹೊಟ್ಟೆಯ ಮಗಳಲ್ಲ; ಸಾಕುಮಗಳು" ಎಂದು ಅವರೆಂದರು.

ನಾನಂದೆ "ನನಗವಳು ವೀಣೆ ನುಡಿಸುವದನ್ನು ನೋಡುವ ಕುತೂಹಲ. ಅವಳನ್ನಿಲ್ಲಿ ಕರೆಯುವಿರಾ?"

"ಅವಳಂತಹ ಹಟಮಾರಿ ಅವಳೇ. ಕರೆದರೂ ಬರಲಿಕ್ಕಿಲ್ಲ" ಎಂದರು ಮಹಂತರು.

"ಸರಿ ನಾವೇ ಅವರ ಗುಡಿಸಲಿಗೆ ಹೋಗೋಣ" ಎಂದೆ ನಾನು. ಮಹಂತರು ಒಪ್ಪಿಕೊಂಡರು. ನಾವೆಲ್ಲ ಅಲ್ಲಿ ಹೋದೆವು.

ಲಕ್ಷ್ಮಿಯನ್ನು ಹೆಸರುಗೊಂಡು ಸಂಬೋಧಿಸುವದಕ್ಕಿಂತ ಳವಳೆಂದು ಕರೆಯುವದೇ ನನಗೆ ಹೆಚ್ಚು ಪ್ರಿಯ.

ನಾವಲ್ಲಿಗೆ ಹೋದಾಗ ಅವಳು ತನ್ನ ವೀಣೆಯನ್ನು ನುಡಿಸುವದರಲ್ಲಿ ತಲ್ಲೀನಳಾಗಿದ್ದಳು. ಆದರೂ ಸಹ ನಮ್ಮನ್ನು ನೋಡಿ ತನ್ನ ಪ್ರೀತಿಯ ವಾದ್ಯವನ್ನು ಕೆಳಗಿಟ್ಟು "ಬನ್ನಿ" ಎಂದಳು.

ಅವಳ ಗುಡಿಸಲು ಸಣ್ಣದಿದ್ದರೂ ಸ್ವಚ್ಛವಾಗಿತ್ತು. ಗುಡಿಸಲಿನ ಮುಂದೆ ನಾನಾತರದ ಹೂಗಿಡಗಳು ತಮ್ಮ ಸುಗಂಧವನ್ನು ಬೀರುತ್ತ ನಿಂತಿದ್ದವು. ಅವನ್ನೆಲ್ಲ ಅವಳೇ ಹಚ್ಚಿ ಜೋಪಾನ ಮಾಡಿದ್ದಳಂತೆ.

ಒಳಗಿನಿಂದ ಹುಲ್ಲುಚಾಪೆಗಳನ್ನು ತಂದು ಹಾಸುತ್ತ ನಮಗೆ ಕೂಡಲು ಹೇಳಿದಳು ಅವಳು. ಮತ್ತು "ನೀವು ಯಾರು? ಏತಕ್ಕೆ ಇಲ್ಲಿ ದಯಮಾಡಿಸಿದಿರಿ?' ಎಂದಳು.

"ನಾವು ಇಲ್ಲಿಯೇ ನೆರೆಯ ಆಶ್ರಮದವರು, 'ಸಫರಿ'ಗಾಗಿ ಇತ್ತ ಬಂದು ಮಹಂತರ ಸನ್ನಿಧಿಯಲ್ಲಿ ಕುಳಿತಿದ್ದೆವು. ಆಗ ನಿಮ್ಮ ಮಂಜುಲ ವೀಣಾನಾದವು ನಮ್ಮನ್ನಿಲ್ಲಿಗೆ ಬರುವಂತೆ ಮಾಡಿತು. ಇನ್ನಷ್ಟು ಹತ್ತರದಿಂದ ಮನವಾರೆ ಕೇಳಬೇಕೆಂದು ಬಂದೆವು. ದಯವಿಟ್ಟು ವೀಣೆ ನುಡಿಸುವಿರಾ?" ಎಂದು ನಾನು ಕೇಳಿದೆ.

ಕೃತಜ್ಞತೆಯಿಂದ "ಆಗಬಹುದು, ಅದಕ್ಕೇನು?" ಎಂದು ವೀಣೆಯನ್ನೆತ್ತಿ ತೊಡೆಯಮೇಲಿರಿಸಿಕೊಂಡು ನುಡಿಸತೊಡಗಿದಳು.

ಸೂರದಾಸ, ತುಳಸೀದಾಸ ಮತ್ತು ಮೀರಾಬಾಯಿಯ ಭಕ್ತಿರಸ ಭರಿತವಾದ ನಾಲ್ಕೈದು ಪದಗಳನ್ನು ವೀಣೆಯೊಂದಿಗೆ ಹಾಡಿದಳು.

ಅವಳಾಡುತ್ತಿದ್ದುದು ಶುದ್ಧ ಹಿಂದೀ ಭಾಷೆ. ಈಗ ಎರಡು ವರುಷಗಳಿಂದ ಮಧ್ಯಭಾರತದಲ್ಲಿ ಇರುವದರಿಂದ ರಾಷ್ಟ್ರಭಾಷೆಯಾದ ಹಿಂದಿಯನ್ನು ನಾನಾದರೂ ಚೆನ್ನಾಗಿ ಆಡಿ ತಿಳಿಯಬಲ್ಲೆ.

ಕೊಂಚ ಹೊತ್ತು ಎಲ್ಲರೂ ಸುಮ್ಮನಿದ್ದೆವು. "ನಿಮ್ಮ ಹೆಸರೇ ನಮ್ಮಾ" ಎಂದು ಮೊದಲು ನಾನೇ ಹಿಂದಿಯಲ್ಲಿ ಪ್ರಸ್ತಾಪಿಸಿದೆ.

"ನನ್ನ ಹೆಸರೇ? ಕೇಳಿ ಮಾಡುವದೇನು?" ಎಂದಳವಳು.

"ಪ್ರಥಮಗ್ರಾಸೇ ಮಕ್ಷಿಕಾ ಪಾತಃ" ಎಂಬಂತೆ ನನ್ನ ಪಾಡಾಯಿತು. ನಾನು ತುಸುಹೊತ್ತು ಸುಮ್ಮನಿದ್ದು, "ಹಾಗಾದರೆ ಹೇಳುವದಿಲ್ಲವೇನಮ್ಮಾ?" ಎಂದೆ.

"ಹೇಳಬಾರದೆಂದು ಆಣೆ ಇಟ್ಟುಕೊಂಡಿಲ್ಲ. ಆದರೆ ನನ್ನಂತಹ ಹತಭಾಗಿನಿಯ ಹೆಸರಿನಿಂದ ನಿಮಗೇನು ಪ್ರಯೋಜನ?" ಎಂದು ಹರಿದು ಬರುತ್ತಿರುವ ಕಣ್ಣೀರನ್ನೊರಸಿಕೊಳ್ಳುತ್ತ ನುಡಿದಳು ಅವಳು.

ನನ್ನ ಕುತೂಹಲವು ಹೆಚ್ಚಾಯಿತು. ಏನಿದ್ದಷ್ಟನ್ನು ಕೇಳಿಯೇ ತೀರಬೇಕೆಂಬ ಇಚ್ಛೆ ಪ್ರಬಲವಾಯಿತು. "ಅದೇಕವಮ್ಮಾ ಕಣ್ಣೀರು? ಜಗತ್ತಿನಲ್ಲಿ ಬಹುಜನರ ಭಾಗ್ಯವು ಒಂದಿಲ್ಲೊಂದು ತೆರದಿಂದ ಹತವೇ ಇರುತ್ತದೆ" ಎಂದೆ. ಅವಳು ಮಾತಾಡಲಿಲ್ಲ ಹಾಡತೊಡಗಿದಳು.

ಜನ್ಮಲಿಯಾ ಮೈನೇ ಆಸೂಮೇ
ಆಸೂ ಹಿ ಮೇರೇ ಜೀವನಮೇ
ಮೈ ಪಗಲೀ ಬಿಖೇರತೀ ಫಿರತೀ
ಆಸೂಹೀ ವನ-ವನ-ಉಪವನಮೇ:

(ನನ್ನ ಹುಟ್ಟು ಕಣ್ಣೀರಲ್ಲಿ, ನನ್ನ ಜೀವನವೆಲ್ಲ ಕಣ್ಣೀರೇ. ನಾನು ಹುಚ್ಚಿ; ವನೋಪವನಗಳಲ್ಲಿ ಕಣ್ಣೀರನ್ನೇ ಹರಿಸುತ್ತ ತಿರುಗುವೆ.)

ಅವಳು ಹಾಡಿದ ಹಾಡಿನ ಅರ್ಥವು ನನಗೆ ತಿಳಿದರೂ ತಿಳಿಯದವಳಂತೆ ನಟಿಸುತ್ತಾ "ನನಗೆ ಈ ಹಾಡಿನ ಅರ್ಥವಾಗುವದಿಲ್ಲವಮ್ಮಾ; ಏನಿದ್ದುದನ್ನು ಸ್ಪಷ್ಟವಾಗಿ ಹೇಳುವಿರಾ? ಎಂದು ನಾನು ಕನಿಕರದಿಂದ ಕೇಳಿದೆ.

"ಹಾ! ಹೇಳಬೇಕೆಂದೇ ಕುಳಿತಿರುವೆ. ನಾನೋರ್ವ ಕನ್ನಡಿತಿ."

'ನಾನೋರ್ವ ಕನ್ನಡಿತಿ!'

ಈ ಮಾತನ್ನು ಕೇಳುತ್ತಲೇ ನನ್ನೆದೆ ನಡುಗಿತು; ಮೈ ಜುಮ್ಮೆಂದಿತು. ಮೈ ಕೂದಲುಗಳೆಲ್ಲಾ ನೆಟ್ಟಗಾದವು. ಸ್ವಪ್ನವೋ ಮಾಯವೋ ಎಂಬಂತೆ ನನ್ನ ಹಾಡಾಯಿತು. ಈ ಕಿವಿಗಳು ನನ್ನವೇ ಇರುವವಷ್ಟೇ! ಎಂದು ಸಂದೇಹಿಸುತ್ತ ಕಿವಿಗಳ ಮೇಲೆ ಕೈಯ್ಯನ್ನೆಳೆದುಕೊಂಡೆ.

ಆ ಚಿಕ್ಕ ಗುಡಿಸಲಿನಲ್ಲಿ ಎತ್ತನೋಡಿದತ್ತ ನೀರವತೆಯೋ ನೀರವತೆಯಾಗಿಬಿಟ್ಟಿತ್ತು. ಗುಡಿಸಲಿನ ಹೊರಗಿದ್ದ ಗಿಡಬಳ್ಳಿಗಳು ಕೂಡ ಅವಳ ದುಃಖದೊಡನೆ ಬೆರೆತವೋ ಎಂಬಂತೆ ಸ್ತಬ್ಧವಾಗಿ ನಿಂತಿದ್ದವು.

"ನಾನೂ ಒಬ್ಬ ಕನ್ನಡಿತಿ. ನಿಮಗೆ ಕನ್ನಡ ಬರುತ್ತದೇನು?" ಎಂದು ನಾನಂದೆ.

ತನಗೆ ಅಕಸ್ಮಾತ್ತಾಗಿ ಒಬ್ಬ ಕನ್ನಡಿತಿಯ ದರ್ಶನವಾದದ್ದಕ್ಕೆ ಅವಳಿಗೆ ಆಶ್ಚರ್ಯವೂ ಪರಮಾನಂದವೂ ಒಮ್ಮೆಲೇ ಉಂಟಾದವು. ಅವಳು "ಕನ್ನಡ ಬಾರದೇನು?" ಎಂದು ಒಂದು ಹಾಡನ್ನು ಹಾಡಿದಳು.

ಕನ್ನಡದ ನಾಡನುಡಿ, ಕನ್ನಡದ ನಾಡಸಿರಿ
ಎಲ್ಲಿಯೂ ಜಗದಿ ಕಾಣೆ!
ಕನ್ನಡದ ಕೋಗಿಲೆಯ ಕಮನೀಯ ಗಾನವನು
ಪೇಳುವೆನು ದೇವರಾಣೆ!!

ಪರನಾಡಿನಲ್ಲಿದ್ದರೂ ಕೂಡ ತನ್ನ ಪ್ರಾಂತದ ಸದಭಿಮಾನಪೂರ್ಣವಾದ ಮಾತನ್ನು ಕೇಳಿ ನನಗೆ ಹಿಡಿಸಲಾರದ ಹಿಗ್ಗಾಯಿತು. ಇದೆಲ್ಲವನ್ನು ನೋಡುತ್ತ ಮಹಂತರು ಬೆಪ್ಪಾಗಿ ಕುಳಿತುಕೊಂಡಿದ್ದರು. ನಾನವಳ ಪಾಠವನ್ನು ತಡೆದು ನಡುವೇ ಮಾತನಾಡಿಸಿದೆ.

"ನಿಮ್ಮೂರು ಯಾವುದಕ್ಕ? ಇಲ್ಲಿಗೇಕೆ ಬಂದಿರುವೆ?"

ಅವಳು ತನ್ನ ಬಾಳಿನ ಕಥೆಯನ್ನು ಹೇಳಲು ಆರಂಭಿಸಿದಳು.

"ನಾನು ಉತ್ತರಕರ್ನಾಟಕದ ಒಂದು ಹಳ್ಳಿಯವಳು. ನಾನು ಚಿಕ್ಕವಳಿರುವಾಗ ನನ್ನ ತಂದೆ, ನನ್ನ ತಾಯಿಯನ್ನೂ ನನ್ನನ್ನೂ ಬಿಟ್ಟು ಪರಲೋಕಕ್ಕೆ ತೆರಳಿದರು. ಅನಾಥಳಾದ ನನ್ನ ತಾಯಿ ನನ್ನೊಡನೆ ಒಂದು ಚಿಕ್ಕ ಮನೆಯಲ್ಲಿ ಇರುತ್ತಿದ್ದಳು. ನನಗಾಗ ಎಂಟು ವರುಷ.

‘‘ ನಮ್ಮ ಪುರೋಹಿತರು ದಿನಾಲು ನಮ್ಮ ಮನೆಗೆ ತಪ್ಪದೇ ಬರುತ್ತಿದ್ದರು. ದಿನವೂ ನಮ್ಮ ತಾಯಿಗೆ ‘ ಅಷ್ಟಾವರ್ಷಾ ಭವೇತ್ಕನ್ಯಾ ’ ಎಂದು ಅವರು ಶಾಸ್ತ್ರ ಹೇಳುತ್ತಿದ್ದರು. ಅವಳು ಸ್ವಲ್ಪ ಹುಚ್ಚಿ, ಅವರ ಆ ಉಪದೇಶಕ್ಕೆ ಕಿವಿಗೊಟ್ಟು ನನ್ನ ಮದುವೆಯ ಸಿದ್ಧತೆಯನ್ನು ಮಾಡ ತೊಡಗಿದಳು.

‘‘ ನಮ್ಮ ಪುರೋಹಿತರ ಆಪ್ತರಂತೆ– ಯಾರೋ ಒಬ್ಬ ಮುದುಕರಿಗೆ ನನ್ನನ್ನು ಕೊಡುವದು ಗೊತ್ತಾಯಿತು. ಮದುವೆಯ ಅರ್ಥವೇನೆಂದು ನನಗಾಗ ತಿಳಿಯುತ್ತಿರಲಿಲ್ಲ. ಆದರೂ ಮದುವೆಯಾಯಿತು. ಉಟ್ಟು ಕೊಳ್ಳಲು ನನಗೆರಡು ಸೀರೆಗಳು ಸಿಕ್ಕವೆಂದು ಹಿಗ್ಗಾಯಿತು. ಮದುವೆಯ ಮಂಟಪವಿನ್ನೂ ಇಳಿದಿರಲಿಲ್ಲ; ಮದುಮಗನು ಮರಣಕ್ಕೆ ತುತ್ತಾದನು. ನನ್ನ ತಾಯಿಯ ದುಃಖಕ್ಕೆ ಸೀಮೆಯಿಲ್ಲದಾಯಿತು. ಅವಳಳುವನ್ನು ತಿಳಿಯದೇ ನನಗೆ ನಗುಬರುತ್ತಿತ್ತು.

‘‘ ನಾನು ದಿನದಿನಕ್ಕೆ ಬೆಳೆದು ದೊಡ್ಡವಳಾದೆನು. ನಾನು ಯಾವಾಗಲೂ ಉಲ್ಲಾಸದಿಂದಲೇ ಇರುತ್ತಿದ್ದೆ. ನನ್ನ ತಾಯಿಗೆ ನನ್ನ ಉಲ್ಲಾಸ ನೆಂಪರೆ ಎದೆಗೆ ಕಲ್ಲುಬಡಿದಂತಾಗುತ್ತಿತ್ತೆಂಬುದು ನನಗೆ ಹಿಂದಿನಿಂದ ತಿಳಿದು ಬಂತು, ಅವಳೆಂದೂ ನನ್ನ ಮುಂದೆ ಅದನ್ನು ಹೇಳಿರಲಿಲ್ಲ.

‘‘ ನಾನು ಹನ್ನೆರಡು ಹದಿಮೂರು ವರುಷದವಳಾದೆ. ನನಗೆ ವಿದ್ಯೆ ಕಲಿಯಬೇಕೆಂಬ ಬವಲವಿಕೆ ದಿನದಿನಕ್ಕೆ ಹೆಚ್ಚಾಗತೊಡಗಿತು. ನನ್ನಿಚ್ಛೆಯನ್ನು ತಾಯಿಯ ಮುಂದಿಟ್ಟೆ. ಅವಳೇನೂ ಮಾತಾಡಲಿಲ್ಲ. ಅವಳ ಕಣ್ಣಿನಿಂದ ನೀರಿನ ಹನಿಗಳೆರಡು ಉದುರಿ ನೆಲದ ಮೇಲೆ ಬಿದ್ದವು.

‘‘ ಎಷ್ಟೆಂದರೂ ತಾಯಿಯ ಕರುಳು. ನನ್ನನ್ನು ಮುಂದಕ್ಕೆಳೆದು ಕೊಂಡು ಮೈದಡವುತ್ತ ‘‘ ಹೆಣ್ಣು ಕಲಿತು ಕೆಟ್ಟಿತಂತೆ, ಗಂಡು ಕೂತು ಕೆಟ್ಟಿತಂತೆ ’’ ಎಂದಳು.

‘‘ ಹಾಗಂದರೇನಮ್ಮಾ ’’ ಎಂದು ನಾನಂದೆ.

‘‘ ಹೀಗೆಯೇ ಶಾಸ್ತ್ರದಲ್ಲಿದೆ. ಹೆಂಗಸರು ವಿದ್ಯೆ ಕಲಿತರೆ ಕೆಡುತ್ತಾರಂತೆ ’’ ಎಂದು ಹೇಳಿದಳು ತಾಯಿ.

‘‘ ಕೆಡುತ್ತಾರೆಂಬ ಮಾತಿನ ಅರ್ಥವೇ ನನಗಾಗ ತಿಳಿಯುತ್ತಿರಲಿಲ್ಲ. ನಾನು ಮಾತ್ರ ನನ್ನ ಹಟವನ್ನು ಬಿಡಲಿಲ್ಲ. ಕೊನೆಗೆ ತಾಯಿಗೆ

ಸಿಟ್ಟುಬಂತು. "ನಿನಗೆ ವಿದ್ಯೆ ಬುದ್ಧಿ ಕಲಿಸಿ ಸಮಾಜದಲ್ಲಿ ತಲೆಯೆತ್ತಿ ಕೊಂಡು ಹೇಗಿರಲಿ?" ಎಂದಳು ಅವಳು. ಸಮಾಜವೆಂದರೇನು ? ಎಂದು ನನ್ನಷ್ಟಕ್ಕೆ ನಾನೇ ಪ್ರಶ್ನೆ ಕೇಳಿಕೊಂಡೆ. ಅದೊಂದು ಹಕ್ಕಿಪಕ್ಕಿಯಾಗಿರ ಬಹುದೆಂದು ಭಾವಿಸಿ ಸುಮ್ಮನಾದೆ.

"ತಾಯಿಯ ಸಂತೋಷಕ್ಕಾಗಿ ಓದು ಕಲಿಯಲು ಸಾಲೆಗೆ ಹೋಗುವುದನ್ನು ಬಿಟ್ಟುಬಿಟ್ಟೆ. ನಮ್ಮ ನೆರೆಮನೆಯ ಪ್ರಹ್ಲಾದ ನನ್ನ ಬಾಲ್ಯದ ಸಂಗಾತಿ; ಸರಳ ಸ್ವಭಾವ, ಸ್ವಚ್ಛ ಮನ ಅವನದು. ಅದೇ ಆಗ ಕಾಲೇಜು ಬಿಟ್ಟುಬಂದಿದ್ದ. ತಾಯಿಯ ಒಪ್ಪಿಗೆಯಿಂದ ಅವನೇ ನಮ್ಮ ಮನೆಗೆ ಬಂದು ನನಗೆ ಕಲಿಸುತ್ತಿದ್ದ. ಸ್ವಲ್ಪ ದಿವಸಗಳಲ್ಲಿಯೇ ನಾನು ಕನ್ನಡ-ಇಂಗ್ಲೀಷುಗಳನ್ನು ತಕ್ಕಮಟ್ಟಿಗೆ ಕಲಿತುಕೊಂಡೆನು.

"ತಾಯಿ ನೆರೆಹೊರೆಯ ಮನೆಗಳಲ್ಲಿ ಅಡಿಗೆ-ನೀರಿನ ಕೆಲಸಕ್ಕೆ ಹೋಗುತ್ತಿದ್ದಳು. ನಮ್ಮ ಮನೆಗೆ ಪ್ರಹ್ಲಾದ ದಿನಾಲು ಬರಹೋಗು ವದರಿಂದ ಅವಳಿಗೆ ತೊಂದರೆಯಾಗುತ್ತಿತ್ತು. ಅವಳನ್ನು ಜನರು ಹೀಯಾ ಳಿಸತೊಡಗಿದರಂತೆ! ಕೊನೆಗೆ ಕೆಲಸಕ್ಕೂ ಬರಬೇಡ ಎಂದು ಬಿಟ್ಟರಂತೆ. ಮರುದಿನ ಪಂಚಾಂಗದಲ್ಲಿ ಏಕಾದಶಿ ಇಲ್ಲದಿದ್ದರೂ ನಮ್ಮ ಮನೆಯಲ್ಲಿ ಏಕಾದಶಿ ಇತ್ತು. ನಾನು ಅಳುತಳುತ, ಪ್ರಹ್ಲಾದನಿಗೆ ಇದೆಲ್ಲ ಸಂಗತಿ ಯನ್ನು ತಿಳಿಸಿದೆ.

"ಪಾಪ, ಅವನೇನು ಮಾಡಬಲ್ಲ! ಒಂದೆರಡು ದಿನ ನಮ್ಮ ಜತೆಗೆ ಅತ್ತ, ಅಷ್ಟೇ. ನಾಲ್ಕಾರು ತಿಂಗಳುಗಳು ಗತಿಸಿದವು. ಆದರೂ ನಮ್ಮ ದೈವ ಇದ್ದಂತೆಯೇ ಇತ್ತು. ಪ್ರಹ್ಲಾದನಿಗೆ ನಮ್ಮ ಸ್ಥಿತಿಯನ್ನೆಲ್ಲ ನೋಡಿ ಸಹಿಸುವದಾಗಲಿಲ್ಲ. ಪ್ರಹ್ಲಾದ ಕೂಸಿದ್ದಾಗಿನಿಂದಲೇ ನಮ್ಮ ತಾಯಿಯ ಕೈಯಲ್ಲಾಡಿದವ. ಅವನ ಜತೆಗೆ ಮಾತಾಡಲು ನನ್ನ ತಾಯಿಗೆ ಎಳ್ಳಷ್ಟೂ ಸಂಕೋಚವಾಗುತ್ತಿದ್ದಿಲ್ಲ. ಅವಳು ತನ್ನ ದುಃಖವನ್ನೆಲ್ಲ ಒಂದು ದಿನ ಅವನ ಮುಂದೆ ತೋಡಿಕೊಂಡಳು. ಅಂದಿನಿಂದ ಪ್ರಹ್ಲಾದ ನಮಗೆ ಆರ್ಥಿಕ ಸಹಾಯವನ್ನಾದರೂ ಮಾಡತೊಡಗಿದ. ದಿನವೂ ಪ್ರಹ್ಲಾದ ನಮ್ಮ ತಾಯಿಯ ಜತೆಗೆ ಅದೆಷ್ಟೋ ಹೊತ್ತಿನವರೆಗೆ ಮಾತಾಡುತ್ತಾ ನಮ್ಮ ಸುಖ-ದುಃಖದಲ್ಲಿ ಪಾಲುಗಾರನಾಗುತ್ತಲಿದ್ದ, ಬರಬರುತ್ತ ನಮ್ಮ ಮನೆಯವನೊಬ್ಬನಾಗಿಬಿಟ್ಟ.

"ಒಮ್ಮೆ ಅವನು ನಮ್ಮ ತಾಯಿಯ ಮುಂದೆ ನನ್ನ ವಿವಾಹದ ಮಾತನ್ನೆತ್ತಿದ. ತಾಯಿ ಬೆಚ್ಚಿಬಿದ್ದು ಕೇಳಿದಳು: "ವಿಧವಾವಿವಾಹ?"

"ಪ್ರಹ್ಲಾದ ಸಮಾಧಾನದಿಂದಲೇ ಮಾತನಾಡಿದ: "ಹೌದು; ಅದರಲ್ಲೇನಿದೆ? ಲಕ್ಷ್ಮಿಯು ಬಾಲವಿಧವೆ ಅಲ್ಲವೇ?"

"ತಾಯಿ ನನ್ನ ಮದುವೆ ಮಾತಿಗೆ ಸಮಾಜದ ಹೆದರಿಕೆಯಿಂದ ಕೂಡಲೇ ಒಪ್ಪಲಿಲ್ಲ. ಆದರೂ ಪ್ರಹ್ಲಾದನು ಆಗಾಗ ಬಗೆಬಗೆಯಿಂದ ತಿಳಿಹೇಳುತ್ತ ಕೊನೆಗೆ ತನ್ನ ಮಾತನ್ನೇ ಗೆಲಿಸಿಕೊಂಡ. ಆತನ ಗೆಳೆಯ ಸುರೇಶನಿಗೆ ನನ್ನನ್ನು ಕೊಡುವದು ನಿಶ್ಚಯವಾಯಿತು. ಈ ಸುದ್ದಿ ಊರಲ್ಲೆಲ್ಲಾ ಹಾಹಾ ಎನ್ನುವಷ್ಟರಲ್ಲಿ ಹರಡಿ ಎಲ್ಲ ಕಡೆಗೆ ಗುಜು ಗುಜು ನಡೆಯಿತು. ಪ್ರಹ್ಲಾದನಾಗಲೀ ಸುರೇಶನಾಗಲೀ ಅದಕ್ಕೆ ಬೆಲೆ ಕೊಡಲಿಲ್ಲ.

ವಿವಾಹಕ್ಕೆ ಇನ್ನು ಎರಡು ದಿನ ಇದ್ದಿತು. ಸುರೇಶನ ತಾಯಿ ಒಂದು ನನ್ನನ್ನು ತಮ್ಮ ಮನೆಗೆ ಊಟಕ್ಕೆ ಬರಬೇಕೆಂದು ಆಗ್ರಹದಿಂದ ಕರೆದುಕೊಂಡು ಹೋದಳು. ನಾನು ಅವರ ಮನೆಯಲ್ಲಿ ಕಾಲಿಡುತ್ತಲೇ ಊಟಕ್ಕಿಂತ ಮೊದಲು ಬೈಗಳುಗಳು ಸಿಕ್ಕವು. ನನಗದರ ಅರ್ಥವೇ ತಿಳಿಯಲಿಲ್ಲ. ಮುಂದೆ ತುಸು ಹೊತ್ತಿನಲ್ಲಿಯೇ ಕೈಯಲ್ಲಿ ಕಂಬಳಿಯನ್ನು ಹಿಡಿದುಕೊಂಡ ಆಳುಮಗನೊಬ್ಬನು ಬಂದನು. ಆಳು ಮುಂದಕ್ಕೆ ಬಂದು ತನ್ನ ಕೈಯಲ್ಲಿದ್ದ ಕಂಬಳಿಯಲ್ಲಿ ನನ್ನನ್ನು ಕಟ್ಟಿ ಹೊತ್ತುಕೊಂಡು ಹೋಗಿ ಊರ ಮುಂದಿನ ಹೊಳೆಯಲ್ಲಿ ಒಗೆದ. . . . ."

ನಾನು ಅವಳ ಕತೆಯಲ್ಲಿ ತಲ್ಲೀನಳಾಗಿ ಅವಳ ದುಃಖವನ್ನು ಅನುಭವಿಸುತ್ತಿದ್ದವಳು, ಅವಳ ಈ ವಾಕ್ಯದಿಂದ ಹೌಹಾರಿ "ಹೋ! ಮುಂದೇನು?" ಎಂದು ಉದ್ಗಾರ ತೆಗೆದೆ.

"ಮುಂದೆ ಎಷ್ಟು ದಿವಸದ ಮೇಲೆಯೋ ನಾನರಿಯೆ. ಒಂದು ದಿನ ಕಣ್ಣು ತೆರೆದು ನೋಡಲಾಗಿ ನಾನೊಬ್ಬ ಮೀನಗಾರನ ಮನೆಯಲ್ಲಿದ್ದೆನು. ನನ್ನನ್ನವರು ನದಿಯಿಂದ ಎತ್ತಿಕೊಂಡು ಬಂದು ವಿಶ್ವಪ್ರಯತ್ನದಿಂದ ಬದುಕಿಸಿದರಂತೆ! ನಾನು ಕಣ್ದೆರೆದು ಮಾತಾಡಿದ್ದರಿಂದ ಅವರಿಗೆ ಬಹಳ ಸಂತೋಷವಾಯಿತು. ನನಗೆ ಹಿಂದಿನ ಮಾತೆಲ್ಲ ಒಂದೊಂದಾಗಿ ಕನಸಿನಂತೆ ನೆನಪಿಗೆ ಬರತೊಡಗಿದವು. ತಾಯಿ–ಪ್ರಹ್ಲಾದರ ಗತಿ ಏನಾಗಿರಬಹುದೆಂದು ನೆನಸಿ ಅತ್ತೆ. ಆ ಮೀನಗಾರ ಈ ಮಹಂತರ ಶಿಷ್ಯ. ನನ್ನ

ನಿಜಸ್ಥಿತಿಯನ್ನು ತಿಳಿದಮೇಲೆ ಅವನು ನನ್ನನ್ನು ಇಲ್ಲಿ ತಂದಿಟ್ಟನು. ಅಂದಿನಿಂದ ನಾನು ಇಲ್ಲಿಯೇ ಇರುವೆನು.''

ಅವಳ ಬಾಳಿನ ಕತೆಯನ್ನು ಕೇಳಿ ನನ್ನ ಜೀವ ಮರಮರ ಮರುಗಿತು. ಇಬ್ಬರೂ ತುಸು ಹೊತ್ತಿನವರೆಗೆ ಸುಮ್ಮನಿದ್ದೆವು ಮತ್ತೆ ನಾನೇ ಮೆಲ್ಲಗೆ ''ಇಲ್ಲಿಗೆ ಬಂದು ಎಷ್ಟು ದಿವಸವಾಯಿತು ?'' ಎಂದೆ.

''ಎರಡು ಎರಡೂವರೆ ವರುಷವಾಯಿತು'' ಎಂದಳು ಅವಳು.

''ನಿನ್ನ ತಾಯಿಗೆ ನೀನಿಲ್ಲಿರುವಿಯೆಂಬುದು ಗೊತ್ತಿರುವದೇ ?''

''ಮೊದಲು ಅವಳಿಗೆ ಗೊತ್ತಿದ್ದಿಲ್ಲ. ಇಂದಿಗೆ ಒಂದು ವರುಷದ ಹಿಂದೆ ನಾನೇ ತಾಯಿಯನ್ನು ಕರೆದುಕೊಂಡು ಬಾರೆಂದು ಪ್ರಹ್ಲಾದನಿಗೆ ಪತ್ರ ಬರೆದಿದ್ದೆ.''

''ಬಂದಿದ್ದರೇ ನಿನ್ನ ತಾಯಿ ಹಾಗಾದರೆ ?''

''ಹಾ'' ಎಂದು ದುಃಖದಿಂದ ಅವಳು ಹೇಳಿದಳು.

''ನಿನ್ನ ತಾಯಿಯ ಬಳಿಗೆ ನೀನು ಹೋಗುವದಿಲ್ಲವೇನು ?''

''ಇಲ್ಲ; ಹೋಗುವದಿಲ್ಲ.''

''ಇಲ್ಲಿಯೇ ಇರುವಿಯೇನು ?''

''ಇಲ್ಲ; ಇಲ್ಲಿಯೂ ಇರುವದಿಲ್ಲ.''

''ಹಾಗಾದರೆ ಸುರೇಶನ ಜತೆಗೆ ಮದುವೆಯಾಗಬೇಕೆನ್ನುವಿಯಾ?''

ಅವಳು ಗಹಗಹಿಸಿ ನಕ್ಕು ಹೇಳಿದಳು:

''ಇಲ್ಲ; ನಾನು ಇನ್ನು ಎಂದೆಂದೂ ಮದುವೆಯ ಬಂಧನದ ಮಾತನ್ನೇ ಎತ್ತುವದಿಲ್ಲ. ನನಗೆ ಬೇಕಾದಷ್ಟು ಕೆಲಸಗಳಿವೆ.''

. . . . . . .

ಮುಂದಿನ ರವಿವಾರ ನಮ್ಮ ಆಶ್ರಮದ ಮಿತ್ರರು ಕೆಲವರು 'ಗಡ'ದ ಬೆಟ್ಟಕ್ಕೆ ಹೋಗಿಬಂದರು. ಅವಳನ್ನು ಮಾತಾಡಿಸಿಕೊಂಡು ಬನ್ನಿರೆಂದು ನಾನು ಅವರಿಗೆ ಹೇಳಿದ್ದೆ. ಅವರಿಂದ ನನಗೆ ಹೀಗೆ ತಿಳಿಯಿತು:

''ಅವಳೀಗ ಅಲ್ಲಿಲ್ಲ. ತಮ್ಮ ನಾಡಿನ ಬಾಲವಿಧವೆಯರ ಸೇವೆಗಾಗಿ ಕರ್ನಾಟಕದ ಕಡೆಗೆ ಹೋಗಿದ್ದಾಳಂತೆ. ನಾಲ್ಕು ದಿನಗಳಾದವು.''

# ಕೋಸ್ತನ ಹಚ್ಚೆ

ಮೂವರೂ ತಮ್ಮ ಬಿಡುವಿನಲ್ಲಿ ಏನಾದರೂ ಗಳಿಕೆ ಮಾಡಿಕೊಳ್ಳಬೇಕೆಂದು ಯೋಚಿಸಿದರು. ಫಲಾಹಾರ ಮಂದಿರದಲ್ಲಿ ಕುಳಿತಾಗ ಒಂದು ದೊಡ್ಡ ಆಸ್ತಿಯು ಕೈಸೇರುವ ಸೂಚನೆ ಕಾಣಬೇಕೆ! ಹರಿಯ ಯೋಜನೆಯಂತೆ ಕೋಸ್ತ ಬಳಲಿ ಬೆಂದು ಅಮರನಾದ. ಇನ್ನೇನು, ಮುದಿಕಿಯ ಆಸ್ತಿ ಕೈಗೆ ಪತ್ತುಪ್ರದಕ್ಕೆ ಒಂದು ಬೆರಳು ಮಾತ್ರ....!

## ಕತೆಗಾರ್ತಿ

# ಶ್ರೀಮತಿ ಸುಭದ್ರ

ಇವರೊಬ್ಬ ಶ್ರೀ ಎಚ್. ಸೀತಾರಾಮರಾಯರ ತಂಗಿ. ಇವರಿಗೀಗ ೧೫ ವರುಷ. ಈ ಸಲ ಎಸ್. ಎಸ್. ಎಲ್. ಸಿ. ಪರೀಕ್ಷೆಗೆ ಕಟ್ಟುವರು. ಇವರ ತಂದೆ ಶ್ರೀ. ಗೋವಿಂದರಾಯರೇ ಶ್ರೀ. ಸೀತಾರಾಮರಾಯರಿಗೂ ಈ ಎಲ್ಲ ಹೆಣ್ಣು ಮಕ್ಕಳಿಗೂ ಉತ್ತೇಜನಕೊಟ್ಟರು. ಶ್ರೀಮತಿ ಸುಭದ್ರಮ್ಮನವರ ಅಪ್ರಕಟಿತ ಕಥೆಗಳು ಕೆಲವಿವೆ. ಇದೊಂದು ಇಂಗ್ಲೀಷಿನಲ್ಲಿಯ ವಿನೋದದ ಸಾಮಾನ್ಯಕಥೆ. ಅದನ್ನು ಸಹಜ ಸರಲ ಭಾಷೆಯ ಕನ್ನಡದಲ್ಲಿ ಪರಿವರ್ತಿಸಿದ್ದಾರೆ. ಇವರು ಸ್ವತಂತ್ರ ಕತೆಗಳಿಂದ ತಮ್ಮ ಕಥಾ ಕಲೆಯಲ್ಲಿ ಪ್ರತಿಭೆಯನ್ನು ತೋರಬಲ್ಲರೆಂದು ಆಶಿಸಲಾಗಿದೆ.

ವಿಶಾಲ ಸಮುದ್ರ. ಎಲ್ಲೆಲ್ಲ ನೋಡಿದರೂ ನೀರೆ ಆಗಿದೆ. ಸಮುದ್ರವು ಶಾಂತವಾಗಿದೆ. ಕಣ್ಣಿಗೆ ಕಾಣುವವರೆಗೂ ಜಲರಾಶಿ. ಸಣ್ಣ ಸಣ್ಣ ಅಲೆಗಳು ನೋಡುವುದಕ್ಕೆ ಸಾಷ್ಟಾಂಗನಮಸ್ಕಾರ ಮಾಡುವುದಕ್ಕೆ ಬರುವವೋ ಎಂಬಂತಿತ್ತು. ಆ ವಿಶಾಲ ಸಮುದ್ರದಲ್ಲಿ ಒಂದು ಸಣ್ಣ ಹಡಗು ಬಹಳ ನಿದಾನವಾಗಿ ಹೋಗುತ್ತಿತ್ತು. ಆ ಹಡಗಿನ ಎರಡು

ಕೋಸ್ತ ನ ಹ ಚ್ಚೆ

ಕಡೆಗಳಲ್ಲಿಯೂ ಜನರು ಹುಟ್ಟಿಸ್ಸು ಹಾಕುತ್ತಿದ್ದರು. ಪಡಗು ಈಗಿನ ಕಾಲದ ಹಡಗಿನಹಾಗಿರಲಿಲ್ಲ. ಅದೊಂದು ಪಟಗಳುಳ್ಳನಾವೆ. ಹಡಗು ಬಹಳ ದಿನಗಳ ವಾಣಿಜ್ಯ ಪ್ರವಾಸವಾದ ಮೇಲೆ ತನ್ನ ದೇಶಕ್ಕೆ ಹಿಂತಿರುಗುತ್ತಿತ್ತು. ಕೊನೆಗೆ ಅದು ಹಿಂದೂದೇಶದ ಪಶ್ಚಿಮ ತೀರವನ್ನು ಸಮೀಪಿಸಿತು. ಹಡಗಿನ ಮೇಲಿದ್ದ ಜನರು ತಮ್ಮ ದೇಶ ಬಂತೆಂದು ಬಹಳ ಸಂತೋಷಗೊಂಡರು. ತಮ್ಮ ಮಾತೃಭೂಮಿಯನ್ನು ಪುನಃ ನೋಡುವ ಪುಣ್ಯ ತಮಗೆ ದೊರಕಿತೆಂದು ಆನಂದದಿಂದ ಕುಣಿದರು.

ಹಡಗಿನ ಯಜಮಾನನು ಲಂಗದ ಮತ್ತು ಹವಳದ ದೊಡ್ಡ ವ್ಯಾಪಾರಗಾರ. ಒಳ್ಳೇ ಉದಾರಿ. ಅವನು ತನ್ನ ಹಡಗು ನಡಿಸುವವರಿಗೂ, ಹಡಗಿನ ಇತರ ಕೆಲಸಗಾರರಿಗೂ, ಎರಡು ತಿಂಗಳು ರಜವನ್ನು ಕೊಟ್ಟು, ರಜಮುಗಿದಮೇಲೆ ಕಲ್ಲೀಕೋಟೆ ಬಂದರಕ್ಕೆ ಎಲ್ಲರೂ ಬರಬೇಕೆಂದನು. ಈ ಸುದ್ದಿಯು ಹಡಗಿನಲ್ಲೆಲ್ಲಾ ಹಬ್ಬಿತು. ಎಲ್ಲರೂ ತಮಗೆ ಬಹುದಿನಗಳನಂತರ ವಿರಾಮ ದೊರೆತುದಕ್ಕಾಗಿ ತಮ್ಮ ಯಜಮಾನನನ್ನು ಮನಸ್ಸಿನಲ್ಲಿಯೇ ವಂದಿಸಿದರು.

ಹಡಗು ಕಲ್ಲಿಕೋಟೆಯನ್ನು ಸೇರಿತು. ಹರೀ ಕೋಸ್ತ (De Costa) ಮತ್ತು ಗೋಪಾಲ ಮೂವರೂ ತಮ್ಮ ಯಜಮಾನನಿಂದ ಅಪ್ಪಣೆ ತೆಗೆದುಕೊಂಡು, ತಮ್ಮ ಸಾಮಾನುಗಳನ್ನು ತೆಗೆದುಕೊಂಡು ಕೆಲವು ಮೈಲಿಗಳ ದೂರ ನಡೆದರು. ಅಲ್ಲಿ ಒಂದು ಹಳ್ಳಿ ಸಿಕ್ಕಿತು.

ತೆಂಗಿನ ತೋಟಗಳು ಹಳ್ಳಿಯನ್ನು ಸುತ್ತಿಕೊಂಡು ಕೋಟೆಯ ಹಾಗಿದ್ದವು. ಸುತ್ತಲೂ ಬತ್ತದ ಗದ್ದೆಗಳು ನೋಡುವುದಕ್ಕೆ ಬಹಳ ಸೊಂಪಾಗಿದ್ದವು. ಸಮುದ್ರವನ್ನು ಸೇರುವುದಕ್ಕೆ ಬರುತ್ತಿದ್ದ ಸಣ್ಣ ದೊಂಡು ಹೊಳೆಯು ಬಹಳ ನಿಧಾನವಾಗಿ ಹರಿಯುತ್ತಿದ್ದಿತು. ಅಲ್ಲಲ್ಲಿ ಕೆಲವು ಸಣ್ಣ ಗುಡ್ಡಗಳಿದ್ದವು. ನೋಡುವುದಕ್ಕೆ ಬಹಳ ಸುಂದರವಾಗಿದ್ದಿತು. ಈ ಮೂವರು ಆ ಹಳ್ಳಿಗೆ ಬಂದಾಗ ಸಂಜೆಯಾಗುತ್ತಿತ್ತು. ಅವರು ಒಂದು ಗುಡ್ಡವನ್ನು ಹತ್ತಿ ಸೂರ್ಯಾಸ್ತವನ್ನು ಪೂರ್ತಿಯಾಗಿ ನೋಡಿದರು. ಅವರಿಗೆ ತಮ್ಮ ರಜದಲ್ಲಿ ಸ್ವಲ್ಪಕಾಲ ಅಲ್ಲೇ ಕಳೆಯಬೇಕೆಂದೆನಿಸಿತು. ಕತ್ತಲೆಯಾಗುತ್ತಿದ್ದುದರಿಂದ ಅವರು ಬೇಗ ಊರನ್ನು

ಸೇರಿ ತಾವು ತಂದ ಬುತ್ತಿಯನ್ನು ತಿಂದು, ಒಂದು ಮನೆಯ ಜಗುಲಿಯ ಮೇಲೆ ಮಲಗಿ ನಿದ್ರಿಸಿದರು. ಬಹಳ ನಡೆದದ್ದರಿಂದ ಮಲಗಿದ ತಕ್ಷಣ ನಿದ್ರೆ ಬಂದಿತು.

ಬೆಳಗ್ಗೆ ಎಂಟು ಗಂಟೆಗೆ ಒಬ್ಬೊಬ್ಬರಾಗಿ ಎದ್ದು ಮುಖ ತೊಳೆದು ಕೊಂಡು ಹಿಂದಿನ ದಿನದ ತಿಂಡಿಕನ್ನೇ ತಿಂದು ಬಂದು ಮನೆ ನೋಡುವು ದಕ್ಕೆ ಹೋದರು. ಕೋಸ್ತನು ಮಾತ್ರ ಸಾಮಾನುಗಳನ್ನು ನೋಡಿಕೊ ಳ್ಳುತ್ತಾ ಅಲ್ಲೇ ಕುಳಿತಿದ್ದನು.

ಕೋಸ್ತನು ಹರಿ ಗೋಪಾಲರಿಗಿಂತ ಸ್ವಲ್ಪ ದೊಡ್ಡವನು. ಅವನಿಗೆ ಸುಮಾರು ೩೫–೩೬ ವರುಷವಿರಬಹುದು. ಅವನು ಹೆಚ್ಚಾಗಿ ಅವ ರೊಂದಿಗೆ ಸೇರುತ್ತಿರಲಿಲ್ಲ. ಅವನ ಕೂದಲು ಸ್ವಲ್ಪ ಕೆಂಪು: ಕೆಂಚ ಕೂದ ಲೆನ್ನಬಹುದು. ಹಣೆಯ ಮೇಲೆ ಒಂದು ಮಚ್ಚೆಯಿದ್ದಿತು. ಅವನು ಹುಡು ಗನಾಗಿದ್ದಾಗ ಬಿದ್ದ ಗುರುತಂತೆ, ಆ ಮಚ್ಚೆ. ಅಷ್ಟು ವಯಸ್ಸಾದರೂ ಬಹಳ ಗಟ್ಟಿಮುಟ್ಟಾಗಿ ದೃಢಾಂಗನಾಗಿದ್ದನು. ಹರಿ, ಗೋಪಾಲರು ಇನ್ನೂ ಯುವಕರು. ಸುಮಾರು ೨೦–೨೫ ವರುಷವಿರಬಹುದು. ಅವ ರಿಬ್ಬರು ಯಾವಾಗಲೂ ಒಟ್ಟಿಗಿರುತ್ತಿದ್ದರು. ಸ್ವಲ್ಪ ಹುಡುಗಾಟಿಕೆ ಹೆಚ್ಚು.

ಅವರು ಊರನ್ನೆಲ್ಲಾ ಹುಡುಕಿ ಕೊನೆಗೆ ಒಂದು ಸಣ್ಣ ಮನೆ ಯನ್ನು ೫ ರೂ. ಬಾಡಿಗೆಗೆ ತೆಗೆದುಕೊಂಡರು. ನಿಧಾನವಾಗಿ ಊರನ್ನೆಲ್ಲಾ ನೋಡಿಕೊಂಡು ೧೦ ಗಂಟೆಗೆ ಕೋಸ್ತನ ಬಳಿ ಬಂದರು. ತಮ್ಮ ಸಾಮಾ ನುಗಳನ್ನು ಮನೆಗೆ ಸಾಗಿಸಿ ಅಲ್ಲಿಯೇ ತಮ್ಮ ರಜವನ್ನು ಕಳೆಯ ಲಾರಂಭಿಸಿದರು.

ಒಂದು ದಿನ ಸಾಯಂಕಾಲ ಸೂರ್ಯನು ಪಶ್ಚಿಮಾಂಬುಧಿಯಲ್ಲಿ ಮುಳುಗುತ್ತಿದ್ದನು. ಹರೀ ಮತ್ತು ಗೋಪಾಲರು ಒಂದು ಗುಡ್ಡದ ಮೇಲೆ ಕುಳಿತು ಪ್ರಕೃತಿಸೌಂದರ್ಯವನ್ನು ನೋಡುತ್ತಾ ಸಿಗರೇಟು ಸೇದಿಕೊಂಡು ತಮಾಷೆಯಾಗಿ ಕಾಲಕಳೆಯುತ್ತಿದ್ದರು. ಅವರು ಮಾತ ನಾಡುತ್ತಾ ಮಾತನಾಡುತ್ತಾ ತಾವು ಈ ರಜದಲ್ಲಿ ದುಡ್ಡನ್ನು ಸಂಪಾದನೆ ಮಾಡಬೇಕೆಂದು ನಿರ್ಧಾರ ಮಾಡಿಕೊಂಡರು. ಬಹಳ ಹೊತ್ತು ಅಲ್ಲಿ ಕಾಲ

ಕೋಸ್ತನ ಹಚ್ಚೆ

ಕಳೆದ ಮೇಲೆ ಮನೆಯ ಕಡೆ ಹಿಂತಿರುಗಿದರು. ಅಲ್ಲಿ ಅವರಿಗೆ ಒಂದು ಫಲಾಹಾರ ಮಂದಿರವು ಗೋಚರವಾಯಿತು. ಆ ಫಲಾಹಾರ ಮಂದಿರದ ಬೋರ್ಡಿನಲ್ಲಿ ಕೆಳಗೆ "ಯಜಮಾನತಿ ಶ್ರೀಮತಿ ವಿಮಲಾಬಾಯಿ," ಎಂದು ಬರೆದಿದ್ದಿತು. ಅದನ್ನು ಓದಿ ಅವರಿಗೆ ಆಶ್ಚರ್ಯವಾಯಿತು. ಅದು ವರೆಗೆ ಹೆಂಗಸರು ಫಲಾಹಾರ ಮಂದಿರವನ್ನು ಇಡುವರೆಂದು ಅವರಿಗೆ ಗೊತ್ತಿರಲಿಲ್ಲ. ಅವರು ಆ ಫಲಾಹಾರ ಮಂದಿರವನ್ನು ಪ್ರವೇಶಿಸಿ ಸ್ವಲ್ಪ ತಿಂಡಿತಿಂದು ಮನೆಗೆ ಹಿಂತಿರುಗಿದರು.

ಪ್ರತಿದಿನವೂ ಕೋಸ್ತನು ಮನೆಗೆಲಸ ಮಾಡುವುದು, ಗೋಪಾಲ ಮತ್ತು ಹರೀ ಸಾಯಂಕಾಲ ಗಾಳಿಸೇವನೆಗಾಗಿ ಹೊರಟು ಹಿಂತಿರುಗುವಾಗ ಫಲಾಹಾರ ಮಂದಿರದಲ್ಲಿ ಕೊಂಚಕಾಲ ಹರಟೆ ಹೊಡೆಯುತ್ತಾ ಕುಳಿತು, ನಂತರ ಮನೆಗೆ ಹೋಗುವದು. ಇದು ಅವರ ದಿನಚರಿಯಾಗಿತ್ತು. ಅವರಿಗೆ ಆ ಯಜಮಾನತಿ ಮುದುಕಿಯ ವಿಷಯ ತಿಳಿಯ ಬೇಕೆಂದು ಇಷ್ಟವಾಯಿತು. ಅವರು ಪ್ರತಿದಿನವೂ ಬಂದು ಸ್ವಲ್ಪ ಸ್ವಲ್ಪವಾಗಿ ಅವಳ ವಿಷಯವನ್ನು ತಿಳಿದುಕೊಳ್ಳುತ್ತಲಿದ್ದರು:

ಆ ಮುದುಕಿಯು ಬಹಳ ದಿನಗಳ ಹಿಂದೆ ತನ್ನ ಗಂಡನನ್ನು ಕಳೆದು ಕೊಂಡಳಂತೆ. ಅವಳಿಗೆ ಒಬ್ಬನೇ ಒಬ್ಬನು ಮಗನಿದ್ದನಂತೆ. ಅವನಿಗೆ ಸಮುದ್ರ ಪ್ರಯಾಣವೆಂದರೆ ಬಹಳ ಇಷ್ಟವಂತೆ. ಅವನು ತನ್ನ ೧೫ನೆಯ ವಯಸ್ಸಿನಲ್ಲಿ ಯಾರಿಗೂ ತಿಳಿಯದಂತೆ ಒಂದು ಹಡಗನ್ನು ಹತ್ತಿ ಹೊರಟು ಹೋದನಂತೆ. ಅವನು ಹೋಗಿ ಈಗ ೨೦ ವರುಷಗಳಾದವಂತ. ಅವನು ತನ್ನ ಮೈಮೇಲೆಲ್ಲಾ ಹಚ್ಚೆಯನ್ನು ಹಾಕಿಸಿಕೊಂಡಿದ್ದನಂತೆ. ಅವನಿಗೆ ಸಮುದ್ರ ಪ್ರಯಾಣದಲ್ಲಿಯೂ ಸಮುದ್ರದ ವಿಷಯದಲ್ಲಿಯೂ ಬಹಳ ಪ್ರೀತಿ ಇದೆಯೆಂಬುದು, ಅವನ ಹಚ್ಚೆಯನ್ನು ನೋಡಿದ ತಕ್ಷಣ ತಿಳಿಯುತ್ತದಂತೆ. ಅವನು ತನ್ನ ಕೈ ಮೇಲೆ, ಕಾಲುಗಳ ಮೇಲೆ, ಮೀನುಗಳನ್ನೂ ನೀರುಹಾವುಗಳನ್ನೂ ತಿಮಿಂಗಿಲ ಹವಳದ ಗೂಡು ಮೊದಲಾದ ಸಮುದ್ರದಲ್ಲಿ ವಾಸಿಸುವ ಪ್ರಾಣಿಗಳನ್ನು ಬರೆಯಿಸಿಕೊಂಡಿದ್ದನಂತೆ. ಅವನು ತನ್ನ ಎದೆಯ ಮೇಲೆ ದೊಡ್ಡದೊಂದು ಹಡಗು ಸಮುದ್ರದಲ್ಲಿ ಹೋಗುತ್ತಿರುವ ಹಾಗೆ ಹಚ್ಚೆ ಹಾಕಿಸಿಕೊಂಡಿದ್ದನಂತೆ. ಮತ್ತು ಬೆನ್ನಿನ ಮೇಲೆ ತನ್ನ ಹೆಸರನ್ನು 'ಆ. ಮು. ರ.' ಎಂದು ಬರೆಯಿಸಿಕೊಂಡಿದ್ದನಂತೆ.

ಈ ವಿಷಯವೆಲ್ಲವನ್ನೂ ಆ ಮುದುಕಿ ಎರಡು ದಿನ ಬಹಳ ದುಃಖ ದಿಂದ ಹೇಳಿದಳು. ಕೊನೆಗೆ ಅವಳು ಹೀಗೆಂದಳು:

“ನನ್ನ ಮಗನು ಹೋಗಿ ಇಂದಿಗೆ ೨೦ ವರುಷಗಳಾದವು. ಈಗ ಅವನು ಬದುಕಿರುವನೋ ಇಲ್ಲವೋ ಎಂದು ಸಂದೇಹವಾಗಿದೆ. ಆದರೆ ನನಗೇನೋ ಅವನು ಬದುಕಿರುವನೆಂದೂ ಒಂದು ದಿನ ಅವನನ್ನು ನೋಡುವೆನೆಂದೂ ಎನಿಸುತ್ತದೆ. ನನಗೂ ಈಗ ವಯಸ್ಸಾಗುತ್ತಾ ಬಂತು. ಅವನು ಈಗಲೇ ಬಂದರೆ ನನ್ನ ಆಸ್ತಿಯನ್ನೆಲ್ಲಾ ಅವನಿಗೆ ಕೊಟ್ಟು ಸಂತೋಷವಾಗಿ ಪ್ರಾಣಬಿಡುತ್ತೇನೆ. ದೇವರು ಕಣ್ಣುಬಿಟ್ಟು ನಮ್ಮನ್ನು ಕಾಪಾಡಬೇಕು.”

ಹರಿಯು ಹೇಳಿದನು: “ಅಮ್ಮಾ ನಿಮ್ಮ ಮಗನು ಬದುಕಿರಬೇಕು. ಹೆಚ್ಚೇನೂ ವಯಸ್ಸಾಗಿಲ್ಲವಷ್ಟೇ. ಸ್ವಲ್ಪದಿನಗಳಲ್ಲಿಯೇ ತನ್ನ ಮನೆಗೆ ಹಿಂತಿರುಗಬಹುದು. ನಾವೂ ಸಮುದ್ರ ಪ್ರಯಾಣದಲ್ಲಿಯೇ ಹತ್ತು ವರುಷಗಳನ್ನು ಕಳೆದಿದ್ದೇವೆ. ಈಗ ನಮ್ಮ ದೇಶವನ್ನು ತಲುಪಿರುವೆವು. ಇನ್ನು ಕೆಲವು ದಿನ ಈ ಹಳ್ಳಿಯಲ್ಲಿದ್ದು ನಮ್ಮ ಜನಗಳನ್ನು ನೋಡುವುದಕ್ಕೆ ಹೋಗುವೆವು. ನಾವೂ ನಿನ್ನ ಮಗನ ವಿಷಯ ವಿಚಾರಿಸಿ ಎಲ್ಲಾದರೂ ಸಿಕ್ಕಿದರೆ ಕಳುಹಿಸುವೆವು. ನೀನೇನೂ ದುಃಖಪಡಬೇಕಾದುದಿಲ್ಲ.” ಹೀಗೆಲ್ಲಾ ಸಂತೈಸಿ ಹರಿ ಗೋಪಾಲರು ತಮ್ಮ ಮನೆಯ ದಾರಿಯನ್ನು ಹಿಡಿದರು.

ದಾರಿಯಲ್ಲಿ ಬರುತ್ತಾ ಹರಿ ಹೇಳಿದನು, “ಲೋ ಗೋಪಾಲಾ ಈಗೊಂದು ಉಪಾಯವನ್ನು ಹೇಳುತ್ತೇನೆ ಕೇಳು. ನಾವು ಹೇಗಾದರೂ ಮಾಡಿ ದುಡ್ಡನ್ನು ಸಂಪಾದಿಸಬೇಕೆಂದಿರುವುದು ನಿನಗೆ ತಿಳಿದೇ ಇದೆ. ಈಗ ನೀನು ಒಪ್ಪುವುದಾದರೆ” ಎಂದು ಅಷ್ಟಕ್ಕೆ ನಿಲ್ಲಿಸಿದನು.

ಗೋಪಾಲನು ಆತುರದಿಂದ “ಅದೇನು? ಬೇಗ ಹೇಳು. ನಾನು ಇದುವರೆಗೆ ನಿನಗೆ ಪ್ರತಿ ಆಡಿರುವೆನೇ? ಏನಾ ವಿಷಯ ಬೇಗ ಹೇಳು.” ಎಂದನು.

ಕೋ
ಸ್ತ
ನ
ಹ
ಚ್ಚ

"ನೋಡು ಗೋಪಾಲ! ನಮ್ಮ ಕೋಸ್ತಸು ಆ ಮುದುಕಿ ಹೇಳಿದ ಹಾಗೆಯೇ ಇದ್ದಾನೆ. ಅವಳು ಹೇಳಿದ ಹಾಗೆ ಇವನಿಗೆ ಕೆಂಚ ಕೂದಲಿದೆ. ಅವಳ ಮಗನಂತೆ ಇವನಿಗೂ ೩೫ ವರುಷ. ಅವನ ಹಾಗೆಯೇ ಎತ್ತರವಾಗಿದ್ದಾನೆ. ಕೆಂಪಗೂ ಇದ್ದಾನೆ. ಆದ್ದರಿಂದ ಅವನಿಗೆ ಈ ವಿಷಯವೆಲ್ಲವನ್ನೂ ಹೇಳಿ ಅವನು ಅವಳ ಮಗನಂತೆ ನಟಿಸಿದರೆ ಬೇಕಾದಷ್ಟು ಹಣ ಸಂಪಾದಿಸಬಹುದು" ಎಂದನು ಹರಿ.

"ಆದರೆ ಅವನ ಮೈಮೇಲೆಲ್ಲಾ ಹಚ್ಚೆ ಇದ್ದವಂತೆ. ಅದಕ್ಕೆ ಕೋಸ್ತಸು ಒಪ್ಪುವನೋ ಇಲ್ಲವೋ!" ಎಂದನು ಗೋಪಾಲ.

"ಆ ವಿಷಯ ನನಗೆ ಬಿಡು. ನಾನೆಲ್ಲ ಸರಿಮಾಡುವೆನು." ಎಂದು ಹರಿ ಹೇಳಿದನು. ಅಷ್ಟು ಹೊತ್ತಿಗೆ ಅವರ ಮನೆ ಬಂದದ್ದರಿಂದ, ಅವರ ಮಾತು ಅಲ್ಲಿಗೇ ನಿಂತಿತು.

. . . . . . .

ಹಳ್ಳಿಯಲ್ಲಿ ಎಲ್ಲೆಲ್ಲಿಯೂ ಜನಗಳ ಗದ್ದಲವೇ ಗದ್ದಲ. ದೇಶ ದೇಶಗಳನ್ನು ತಿರುಗಿಬಂದ ಒಬ್ಬ ಸುಪ್ರಸಿದ್ಧ ಹಚ್ಚೆ ಹಾಕುವವನು ಬಂದಿರುವನಂತೆ. ಅವನು ಐದು ನಿಮಿಷಕ್ಕೆ ಒಂದು ಹಚ್ಚೆ ಹಾಕುವನಂತೆ. ಅವನು ಏನೋ ರಸವನ್ನು ಇಟ್ಟುಕೊಂಡಿರುವನಂತೆ. ಅದನ್ನು ಹಚ್ಚಿದರೆ ಸ್ವಲ್ಪವೂ ನೋವಾಗುವುದಿಲ್ಲವಂತೆ. ಅವನು ದೊಡ್ಡ ಚಿತ್ರಗಾರನಂತೆ. ವಿಧವಿಧವಾದ ಚಿತ್ರಗಳನ್ನು ಬರೆದು ಹಚ್ಚೆ ಹಾಕುವನಂತೆ.

ಅವನಿಗೆ ಆ ಹಳ್ಳಿಗೆ ಬಂದಾಗಿನಿಂದ ದುಡ್ಡಿನ ಸುರಿಮಳೆ. ಜನರು ನಾ ಮುಂದು ತಾ ಮುಂದೆಂದು ಹಚ್ಚೆ ಹಾಕಿಸಿಕೊಳ್ಳುವುದಕ್ಕೆ ಹೋಗುತ್ತಿದ್ದಾರೆ. ಅವನಿಗೆ ಊಟತಿಂಡಿಗೆ ಹೊತ್ತಿಲ್ಲವಂತೆ. ಮುಂತಾಗಿ ಊರಲ್ಲೆಲ್ಲಾ ಹರಡಿತು. ಈ ವಿಷಯ ಹರಿ ಗೋಪಾಲರಿಗೂ ತಿಳಿಯಿತು. ಅವನು ಈಗ ಬಂದಿರುವುದು ತಮ್ಮ ಅದೃಷ್ಟವೆಂದೇ ದೇವರನ್ನು ಮನಸಾ ವಂದಿಸಿದರು.

ಹರಿ ಮಾತನಾಡುತ್ತಾ ಕೋಸ್ತಸಿಗೆ "ನೋಡು ಅಣ್ಣಾ, ಈಗ ಒಂದು ದೊಡ್ಡ ಕೆಲಸ ಮಾಡಬೇಕಾಗಿದೆ. ಆದರೆ ಅದು ಬಹಳ ಸುಲಭ. ಮೂರು ದಿನಗಳಲ್ಲಿ ನಮಗೆ ಬೇಕಾದಷ್ಟು ಹಣ ಸಿಕ್ಕುತ್ತದೆ" ಎಂದನು.

ಕೋಸ್ತನು "ಅದೇನು? ಬೇಗ ಹೇಳು. ನಾನೂ ನಿನಗೆ ನನ್ನ ಕೈಲಾದಷ್ಟು ಸಹಾಯ ಮಾಡುವೆನು" ಎಂದನು.

"ಆ ಕೆಲಸವನ್ನು ನಿನ್ನ ಹೊರತು ಯಾರೂ ಮಾಡಲಾರರು. ಅದರಿಂದ ನಿನಗೆ ಬಹಳ ಸುಖವಾಗುವುದು. ನೀನು ಬೇಕಾದಷ್ಟು ಹಣವನ್ನು ಹೊಂದುವೆ. ಒಂದು ದೊಡ್ಡ ಮನೆಯಲ್ಲಿ ವಾಸಮಾಡುವೆ. ನಿನಗೆ ಕೈಗೊಬ್ಬರು ಕಾಲಿಗೊಬ್ಬರು ಸೇವಕರು ಕೈಕಟ್ಟಿಕೊಂಡು ನಿನ್ನಾಜ್ಞೆಯನ್ನು ಎದುರುನೋಡುವರು. ನೀನು ಏನಾದರೂ ಬೇಕೆಂದು ಮನಸ್ಸಿನಲ್ಲಿ ಅಂದುಕೊಂಡ ತಕ್ಷಣ ಆ ಕೆಲಸವು ನಡೆದುಹೋಗುವುದು." ಎಂದು ಅಲ್ಲಿಗೇ ಹರಿ ಮಾತು ನಿಲ್ಲಿಸಿದನು.

ಕೋಸ್ತನಿಗೆ ಇದು ಅರ್ಥವಾಗಲಿಲ್ಲ. ತಾನೇನು ಮಾಡಬೇಕೆಂಬುದೂ ಅವನಿಗೆ ತಿಳಿಯಲಿಲ್ಲ. ತನಗೆ ಸರಿಯಾಗಿ ಪೂರ್ತಿ ಹೇಳಲಿಲ್ಲವೆಂದು ಹರಿಯ ಮೇಲೆ ಕೋಪ ಬಂತು. ಆದರೆ ಅದನ್ನು ತೋರಗೊಡಲಿಲ್ಲ. ನಿದಾನವಾಗಿ ವಿಷಯವೇನೆಂದು ಕೇಳಿದನು. ತಾನು ತನ್ನ ಕೈಲಾದಷ್ಟು ಸಹಾಯಮಾಡಿ ಅವನಿಗೆ ದುಡ್ಡು ಸಂಪಾದಿಸುವುದಕ್ಕೆ ನೆರವಾಗುವೆನೆಂದನು. ಆಗ ಹರಿಯು ಮುಂದಿನ ವಿಷಯವನ್ನೆಲ್ಲಾ ಒಂದು ಚೂರೂ ಬಿಡದೆ ಹೇಳಿದನು.

"ಕೋಸ್ತ, ನೀನು ಎಲ್ಲದರಲ್ಲಿಯೂ ಮುಂದುಕಿಯ ಮಗನ ಹಾಗಿರುವೆ. ಆದರೆ ನಿನ್ನದೊಂದು ಕೆಲಸವಿದೆ. ಅದೇ ಸ್ವಲ್ಪ ಕಷ್ಟ. ಅದಕ್ಕೆ ನೀನು ಒಪ್ಪಲೇಬೇಕು. ಈಗ ಈ ಊರಿಗೆ ಒಬ್ಬ ಹಚ್ಚೆ ಹಾಕುವವನು ಬಂದಿರುವನಂತೆ. ಅವನ ಕೈಲಿ ಈ ದಿನ ರಾತ್ರಿ ನೀನು ಹಚ್ಚೆ ಹಾಕಿಸಿಕೊಳ್ಳಲೇಬೇಕು" ಎಂದನು.

ಮೊದಲು ಕೋಸ್ತನು ಇದಕ್ಕೆ ಒಪ್ಪಲಿಲ್ಲ. ಆದರೆ ಅವನ ಹಟವೇನೂ ಸಾಗಲಿಲ್ಲ. ಅದಕ್ಕವನು ಒಪ್ಪಲೇಬೇಕಾಯಿತು.

. . . . . . .



ರಾತ್ರಿ ಕತ್ತಲೆಯು ತಾನೇ ತಾನಾಗಿ ಹಬ್ಬಿದೆ. ಊರಲ್ಲಿ ಎಲ್ಲೆಲ್ಲಿಯೂ ನಿಶ್ಶಬ್ದ. ನಿದ್ರಾದೇವಿಯು ತನ್ನ ಮಾಯೆಯನ್ನು ಬೀರಿದ್ದಾಳೆ.

೮೦ ಗ ಪ ಪ್ಲೆ

ಜನರೆಲ್ಲರೂ ತಮ್ಮ ತಮ್ಮ ಮನೆಗಳಲ್ಲಿ ನಿದ್ದೆ ಮಾಡುತ್ತಲಿದ್ದಾರೆ. ಈ ಸಮಯದಲ್ಲಿ ಒಂದು ಸಣ್ಣ ಮನೆಯ ಒಂದು ಕೊಠಡಿಯಲ್ಲಿ ಮಾತ್ರ ದೀಪ ಉರಿಯುತ್ತಲಿದೆ. ಒಬ್ಬನು ಮಲಗಿಕೊಂಡು ನರಳುತ್ತಲಿದ್ದಾನೆ. ಇನ್ನು ಮೂವರು ಅವನ ಸುತ್ತಲೂ ಕುಳಿತಿದ್ದಾರೆ.

ಹರಿ ಹೇಳಿದನು, "ಪಂಡಿತರೇ, ಈ ದಿನವೇ ಕೆಲಸವನ್ನೆಲ್ಲಾ ಪೂರಯಿಸಿಬಿಡಿ. ಆದರೆ ಈ ವಿಷಯವನ್ನಾರಿಗೂ ತಿಳಿಸಕೂಡದು. ಹಡಗನ್ನೊಂದು ಎದೆಯ ಮೇಲೆ ಬರೆದು ಬಿಡಿ ಎಂದು ಹೇಳಿ, ಅವನಿಗೆ ಕೆಲವು ರೂಪಾಯಿಗಳನ್ನು ಕೊಟ್ಟನು. ರೂಪಾಯಿಗಳನ್ನು ನೋಡಿ ಪಂಡಿತನು ಕೆಲಸಕ್ಕೆ ಶುರು ಮಾಡಿದನು.

ಎಲ್ಲವನ್ನು ಬರೆಯುವ ಹೊತ್ತಿಗೆ ಕೋಸ್ತನಿಗೆ ಪ್ರಜ್ಞೆತಪ್ಪಿತ್ತು. ಅಷ್ಟು ಹೊತ್ತಿಗೆ ಚಿತ್ರಗಾರನು ಹೊರಟುಹೋಗಿದ್ದನು. ಹರಿ ಗೋಪಾಲರಿಗೆ ಬಹಳ ಭಯವಾಯಿತು. ಕೋಸ್ತನಿಗೆ ತಿರುಗಿ ಜ್ಞಾನತಪ್ಪಿತು. ಹರಿಯು ತಣ್ಣೀರನ್ನು ಅವನ ತಲೆಯ ಮೇಲೆಯೂ ಮುಖದ ಮೇಲೆಯೂ ಚುಮುಕಿಸಿದನು. ಬೆಳಗಿನವರೆಗೆ ಜ್ಞಾನವೇ ಬರಲಿಲ್ಲ.

ಬೆಳಗ್ಗೆ ಎಂಟು ಗಂಟೆಗೆ ಕೋಸ್ತನಿಗೆ ಜ್ಞಾನವು ಬಂದಿತು. ಬಹಳ ನಿಶ್ಶಕ್ತಿಯಾಗಿತ್ತು. ಆ ರಾತ್ರಿ ಬಂದ ಜ್ವರ ಮೂರುದಿನಗಳತನಕ ಆರಲೇ ಇಲ್ಲ. ಅವನಿಗೆ ಚೆನ್ನಾಗಿ ವಾಸಿಯಾಗುವುದಕ್ಕೆ ಹದಿನೈದು ದಿನಗಳಾಯಿತು. ಅಷ್ಟುಹೊತ್ತಿಗೆ ರಜವು ಮುಗಿಯುತ್ತಾ ಬಂದಿತು. ಇನ್ನು ಮೂರುದಿನಗಳು ಮಾತ್ರ ಉಳಿದಿವೆ.

. . . . . . .

ಹರಿ ಗೋಪಾಲರು ದಿನಚರಿಯಂತೆ ಮುದುಕಿಯ ಬಳಿಗೆ ಹೋಗಿ ಆ ಮಾತು ಈ ಮಾತು ಆಡುತ್ತಾ ಕುಳಿತರು. ಕೊನೆಗೆ ಮುದುಕಿ ಹೇಳಿದಳು.

"ಹರೀ, ಈಗೊಬ್ಬ ಜೋತಿಷ್ಯ ಹೇಳುವವನು ಬಂದಿದ್ದಾನೆ.ಅವನು ಪ್ರತಿಯೊಂದನ್ನೂ ಸರಿಯಾಗಿ ಹೇಳುತ್ತಾನೆ. ಅವನನ್ನು ನನ್ನಮಗನ ವಿಷಯ ಕೇಳಿದೆ. ಅವನು ಹೇಳಿದನು: ಇನ್ನೆರಡು ದಿನಗಳೊಳಗಾಗಿ

ನನ್ನ ಮಗ ಬರುವನಂತೆ'' ಎಂದಳು. ಇದನ್ನು ಕೇಳಿ ಹರಿಯು ಗೋಪಾಲನ ಕಡೆ ನೋಡಿ ಸುಮ್ಮನಾದನು.

ಮೂರನೆಯ ದಿನ ಕೋಸ್ತನನ್ನು ಫಲಾಹಾರ ಮಂದಿರದಿಂದ ಹೊರಗೆ ನಿಲ್ಲಿಸಿ ತಾವು ಒಳಗೆ ಹೋಗಿ ಮುದುಕಿಗೆ ತಮ್ಮ ಧನ್ಯವಾದಗಳನ್ನು ಅರ್ಪಿಸಿ ತಾವು ನಾಳೆ ಊರಿಗೆ ಹೊರಟು ಹೋಗುವೆವೆಂದರು. ಇದನ್ನು ಕೇಳಿ ಮುದುಕಿಗೆ ಬಹಳ ದುಃಖವಾಯಿತು, ತನ್ನ ಮಗನ ವಿಷಯ ಜ್ಞಾಪಕಕ್ಕೆ ಬಂದು. ಹರಿ ಗೋಪಾಲರು ಹೊರಗೆ ಬಂದು ಕೋಸ್ತನಿಗೆ ಒಳಗೆ ಹೋಗೆಂದು ಹೇಳಿ, ತಮಗೆ ಆಗಾಗ ದುಡ್ಡು ಕಳುಹಿಸು ಎಂದು ಹೇಳಿ ಹೊರಟುಹೋದರು.

ಕೋಸ್ತನು ಯಾರೋ ಪ್ರಯಾಣಿಕನಂತೆ ಬಂದು, ಸ್ವಲ್ಪ ತಿಂಡಿ ತರಹೇಳಿದನು. ಅವನು ತಿಂಡಿತಿನ್ನುತ್ತಾ ತಿನ್ನುತ್ತಾ ತನ್ನ ಬನಿಯನ್ನಿನ ತೋಳನ್ನು ಹಿಂದಕ್ಕೆ ಮಡಿಸಿದನು, ಹಚ್ಚೆ ಕಾಣಲೆಂದು. ತಿಂಡಿ ತಿನ್ನುತ್ತಾ ಬಟ್ಟಲನ್ನು ಕೆಳಗೆ ಉರುಳಿಸಿದನು. ಅದನ್ನು ತೆಗೆದು ಕೊಳ್ಳುವ ನೆವದಿಂದ ಕಾಲಿನಮೇಲಿನ ಬಟ್ಟೆಯನ್ನು ತೆಗೆದು ಕಾಲಿನ ಮೇಲೆಬರೆದಿದ್ದ ಮೀನು ಎಲ್ಲರಿಗೂ ಕಾಣುವಂತೆ ಕುಳಿತನು. ಮುದುಕಿಗೆ ಅವನನ್ನು ನೋಡಿದ ತಕ್ಷಣ ತನ್ನ ಮಗನ ಜ್ಞಾಪಕ ಬಂತು.

“ನಿನ್ನನ್ನು ನೋಡಿದ ತಕ್ಷಣ ನನಗೆ ನನ್ನ ಮಗನ ಜ್ಞಾಪಕ ಬರುತ್ತದೆ. ಅವನೂ ನಿನ್ನಂತೆಯೇ ಇದ್ದನು. ನಿನಗಿದ್ದಂತೆಯೇ ಅವನ ಹಣೆಯಮೇಲೆ ಒಂದು ಮಚ್ಚೆಯಿದ್ದಿತು'' ಎಂದು ಅವಳು ಹೇಳಿದಳು. ಮತ್ತು ಅಳುವುದಕ್ಕೆ ಪ್ರಾರಂಭಿಸಿದಳು. ಅವಳು ಅಳುವುದನ್ನು ನೋಡಿ ಅಲ್ಲಿ ಅನೇಕ ಜನ ಬಂದರು.

ಇದನ್ನೆಲ್ಲಾ ಕೇಳುತ್ತಿದ್ದ ಕೋಸ್ತನು ಬೆನ್ನನ್ನು ಕೆರೆದುಕೊಳ್ಳುವ ನೆವದಿಂದ, ಬೆನ್ನಿನಮೇಲಿನ ಬಟ್ಟೆಯನ್ನು ಸರಿಸಿದನು. ಜನರು ಅವನ ನಾವಿಕನ ಉಡುಪನ್ನು ನೋಡಿದರು. ಅವನ ಬೆನ್ನಿನ ಮೇಲೆ ‘ಅ. ಮ. ರ.’ ಎಂಬ ಅಕ್ಷರಗಳನ್ನು ನೋಡಿ, ಇವನೇ ಮುದುಕಿಯ ಮಗನೆಂದು ಹೇಳಿದರು. ಇದನ್ನೆಲ್ಲಾ ಕೇಳಿ, ಕೋಸ್ತನು ತನ್ನ ಕೆಲಸವು ಸಫಲವಾಯಿತೆಂದು ಮನದಲ್ಲಿಯೇ ಹಿಗ್ಗಿದನು.

ಮುದುಕಿಯು ತನ್ನ ಮಗನ ಚರಿತ್ರೆಯನ್ನೆಲ್ಲಾ ವಿಸ್ತಾರವಾಗಿ ಅದಕ್ಕೆ ಉಪ್ಪುಕಾರ ಹಚ್ಚಿ ಒಂದು ಗಂಟೆ ಹೊತ್ತು ಹೇಳಿ ಕೊನೆಗೆ

“ಒಂದು ದಿನ ನನ್ನ ಮಗನು ಸೌದೆ ಕತ್ತರಿಸುತ್ತಿದ್ದಾಗ ಅಲಕ್ಷ್ಯವಾಗಿ ತನ್ನ ಎಡಗೈ ಹೆಬ್ಬೆಟ್ಟನ್ನು ಪೂರ್ತಿಯಾಗಿ ಕತ್ತರಿಸಿಕೊಂಡು ಬಿಟ್ಟನು” ಎಂದಳು.

ಇದನ್ನು ಕೇಳಿ ಕೋಸ್ತನಿಗೆ ಆಕಾಶವೇ ತಲೆಯಮೇಲೆ ಕಳಚಿ ಬಿದ್ದಂತಾಯಿತು. ಅವನು ತನ್ನ ಸ್ನೇಹಿತರನ್ನು ಪುನಃ ಸೇರೋಣವೆಂದರೆ, ಅವರು ಆಗಲೇ ದುಡ್ಡು ಕಳಿಹಿಸೆಂದು ಹೇಳಿ ಹೊರಟುಹೋಗಿದ್ದರು. ಅವನು ಇನ್ನು ಅಲ್ಲಿರುವುದು ಸರಿಯಲ್ಲವೆಂದು ತಿಳಿದು ಯಾರಿಗೂ ತಿಳಿಯದಂತೆ ಆ ಮನೆಯನ್ನು ಬಿಟ್ಟನು. ರಾತ್ರಿ ಕತ್ತಲಾಗುವವರೆಗೂ ಒಂದು ಮರದಲ್ಲಿ ಕುಳಿತಿದ್ದು, ಕತ್ತಲಾದಮೇಲೆ ತನ್ನ ಸಾಮಾನುಗಳನ್ನು ತೆಗೆದುಕೊಂಡು, ಯಾರಿಗೂ ತಿಳಿಯದಂತೆ ಆ ಊರನ್ನು ಬಿಟ್ಟನು!

(W. W. Jacobsರ ಕತೆಯೊಂದರಿಂದ)

# ಸ್ನೇಹದರ್ಶನ

ಬೆಲೆಗೊಟ್ಟು ಪ್ರೇಮವನ್ನು ಕೊಳ್ಳಲೆಳಸುವ ಕಾಮುಕತೆ, ಬೆಲೆಗಾಗಿ ಮಕ್ಕಳ ಜೀವನ ವನ್ನು ಕೊಳ್ಳಕ್ಕೆಳೆಯುವ ದುರಾಶೆ, ರೂಢಿ ಬಲದಿಂದ ತರುಣಿಯರನ್ನು ಕುಮಾರ್ಗಕ್ಕೆ ತಳ್ಳುವ ವಿಷಮವಿವಾಹ – ಈ ತ್ರಿದೋಷಗಳ ತಾಕಲಾಟದಲ್ಲಿ 'ಪ್ರೇಮಾ'ಗೆ ಆತ್ಮಬಲ ದಿಂದ ಸ್ನೇಹದರ್ಶನವಾಗುತ್ತದೆ. ಅವಳು ಸಂಪನ್ನವೇಷಧಾರಿಯಾದ ದೋಷಭರಿತ ಸಮಾಜವನ್ನು ತುಳಿದು ನಿಂತು ಸುಖ ಪೂರ್ಣ ದಾಂಪತ್ಯವನ್ನು ಪಡೆಯುತ್ತಾಳೆ.

ಕತೆಗಾರ್ತಿ

## ಶ್ರೀಮತಿ ಶ್ಯಾಮಲೆ

ಜಯಕರ್ನಾಟಕ ಸಂಪಾದಕರಾದ ಶ್ರೀ. ಬೆಳಗಾವಿ ರಾಮಚಂದ್ರರಾಯರು ಬಿ. ಎ. ಅವರ ಪತ್ನಿ ಸೌ. ಶ್ಯಾಮಲೆಯವರು. ಇವರ ಕಥಾಕಲೆ 'ನನ್ನನ್ನು ನೋಡಲಿಕ್ಕೆ ಬಂದಾಗ'ದಿಂದ ಅಡಿಯಿಟ್ಟು 'ನಡೆದುಬಂದ ಲಕ್ಷ್ಮಿ'ಯಿಂದ ಮುನ್ನಡೆದು, ಮೊನ್ನೆ ಮೊನ್ನೆ ಪುಸ್ತಕರೂಪದಲ್ಲಿ 'ಹೂಬಿಸಿಲ'ನ್ನು ಹರಡಿದೆ. ಶ್ರೀ. ಸೌ. ಶ್ಯಾಮಲೆಯವರ ಬರವಣಿಗೆಯ ಮಾರ್ಗವೆ ಹೊಸತು. ಉತ್ತರ ಕರ್ನಾಟಕದ ರೂಢಭಾಷೆಯಲ್ಲಿ, ಬಹುಶಃ ಜನಪದ ಕಥಾವಸ್ತುವನ್ನೆತ್ತಿ ಇಂದಿನ ಸಮಾಜದ ತಿರುವುಮುರುವುಗಳನ್ನು ವಿವಿಧ ಪಾತ್ರಸೃಷ್ಟಿಯ ಮೂಲಕ ಮನನಾಟುವಂತೆ ಜಾನಪದ ಭಾಷೆಯಲ್ಲಿ ಚಿತ್ರಿಸುತ್ತಾರೆ. ಪ್ರಸ್ತುತದ ಕತೆ ಹೂಬಿಸಿಲಗಿಂತ ಮೊದಲಿನ ಕತೆ. ವಾಸ್ತವತೆಗೆ ಹೆಚ್ಚು ಪ್ರಾಶಸ್ತ್ಯವಿತ್ತಿರುವುದರಿಂದ, ವರ್ಣಿತ ಸಮಾಜದ ಅತ್ಯಾಚಾರಗಳನ್ನು ಖಂಡಿಸುವುದು ಅನಿವಾರ್ಯವಾದುದರಿಂದ, ಕಥಾವಸ್ತು ಕಾದಂಬರಿಯಷ್ಟು ವಿಶಾಲವಾದುದರಿಂದ ಈ ಕತೆ ದೊಡ್ಡದಾಗಿದೆ. ಆದರೂ ಕುತೂಹಲವು ಪ್ರೇಮಾ ಶಶಿಧರರ ಕುಮಾರದರ್ಶನದ ವರೆಗೂ ಮನವನ್ನು ಹಿಡಿದುಕೊಂಡು ಒಯ್ಯುತ್ತದೆ; ಮತ್ತು ಕೊನೆಯಲ್ಲಿ ವಾಸ್ತವವಾದರೂ ಸೂಚ್ಯವಾದ ಕಲಾಕೌಶಲ್ಯದ ಸೊಗಸಿನಲ್ಲಿ ಬಿಡುತ್ತದೆ. ಉತ್ತರ ಕರ್ನಾಟಕದ ಹೆಣ್ಣುಮಕ್ಕಳಲ್ಲಿ ಕಥಾಕಲೆ ಇವರ ಲೆಕ್ಕಣಿಕೆಯಲ್ಲಿ ರೂಪುಗೊಳ್ಳುತ್ತಿದೆಯೆಂಬುದರಲ್ಲಿ ಸಂದೇಹವಿಲ್ಲ.

## "ಪ್ರೇಮಾ"

"ಏನವ್ವಾ?"

"ಅಟ್ಟದ ಮ್ಯಾಲಿಂದನ ಏನವ್ವಾ ಯಾಕವ್ವಾ ನಡಿಸೀದೆಲ್ಲಾ, ಈಗೆರಡು ತಾಸಾಗಿಹೋತು ನಾ ಚೀರಿಕೊಳ್ಳಿಕ್ಕೆ ಹತ್ತಿ. ಎದ್ದು ತೆಳಗ ಬಾ. ಆ ಸರಾಫ ರಂಗನಾಥರಾಯರು ನಿನ್ನ ವೀಣಾ-ಗಾಯನಾ ಒಂದಿಷ್ಟು ಕೇಳಬೇಕಂತ ಕೂತಾರ. ಅವರಂಥಾ ದೊಡ್ಡ ಮನುಷ್ಯರು, ನೀರಿನ್ಹಾಂಗ ನಿನ್ನ ಮುಂದ ದುಡ್ಡು ಸುರುವಾವ್ರು, ನಿನ್ನ ಕೇಳಿಕೊಂಬೋದು ಹೆಚ್ಚೊ, ಏನ ನೀ ಅವರಿಗೊಂದಿಷ್ಟು ಸಮಾಧಾನಮಾಡಿ ಕಳಿಸೋದು ಹೆಚ್ಚೊ?"

"ಅವ್ವಾ, ಖರೇ ಅಂದ್ರ ಇವೊತ್ತ ನನ್ನ ತಲೀಗೆ ಭಾಳ ತ್ರಾಸಾಗೇದ. ನಾಳೆಗೀಳೆ ಬಾ ಅಂತ ಹೇಳವ್ವಾ ಅವರಿಗೆ."

"ಏಳೇಳು, ಬಾ. ಒರ್ತೀದ್ಯೋ ಏನು ನಾಸಕ ಬಂದು ಎಳಕೊಂಡು ಬಲ್ಯೋರ್ಗೀ?..."

ಪ್ರೇಮಾ ಹಣೆಯ ಮ್ಯಾಲೆ ಕೈಯನ್ನಿಟ್ಟುಕೊಂಡು, "ಅಯ್ಯೋ ನನ್ನ ದೈವ! ದೇವಾ, ನಮ್ಮವ್ವ ತನ್ನ ಹಣೇಬರಹಾಸರ ನೆನಪಿಗೆ ತಂದು ಕೊಂಡು ಬುದ್ಧೀ ಕಲೀಬಾರ್ದ? ಈ ಓದು–ಬರೀ, ಗಾಯನಾ–ವಾದನಾ ಯಾತಕ್ಕ ಸುಡಲಿಕ್ಕೆ ನನಗ ಕಲಿಸೋದು? ಎಲ್ಲಾ ಮುಗದ ಮ್ಯಾಲೆ ನನ್ನ ಒಯ್ದು ಒಬ್ಬ ಕಾಮಾಂಧ ಸಾಹುಕಾರನ ಉಡೀಒಳಗ ಹಾಕೋದ್ಯಾತಕ್ಕ ಬೇಕು? ಅದರಕಿಂತಾ ಧಣ್ಣಾಗ ಒಬ್ಬ ಹಾದೀಲೆ ಹೋಗೋ ಭಿಕಾರಿಗೆ ನನ್ನ ಲಗ್ನಾ ಮಾಡಿಕೊಟ್ರ ನಾ ಸುಖದಿಂದ ಇದ್ದೇನು...

ದೇವಾ, ಇಲ್ಲಾ, ಇನ್ನ ಮಾತ್ರ ಸುಮ್ಮನ ಕೂಡ್ರಲಾರೆ; ಈ ಸಂಕಟದೊಳಗಿಂದ ಪಾರಾಗುಹಾಂಗ ನನಗ ಶಕ್ತೀ ಕೊಡು, ನನಗ ಹುರುಪು ಕೊಡು.. ಎಷ್ಟು ದಿವಸಾ ಈ ಅಳಬುರುಕತನದೊಳಗ ಕಾಲಾ ಕಳೀಲಿ? ಇನ್ನೂ ಮುಂದ ಒರೋ ಪ್ರಸಂಗ ಥೊಡ್ಡದs ಅದ... ಆ ಹೇಸಿ ಪ್ರಸಂಗದೊಳಗಿಂದ ನನ್ನ ಪಾರುಮಾಡು, ರಘುವೀರಾ! ನಿನ್ನ ಹೊರತು ನನ್ನ ಯಾರು ಕಾಯಾವ್ರು?....'' ಎಂದುಕೊಳ್ಳುತ್ತ, ಎದುರಿಗಿದ್ದ ಕೋದಂಡರಾಮನ ಹಸ್ತಿದಂತದ ಮೂರ್ತಿಯ ಪಾದದ ಮೇಲೆ ತಲೆಯಿಟ್ಟು ಅಳಹತ್ತಿದಳು.

ಯಾರೋ ಮೆಟ್ಟಿಲು ಹತ್ತಿ ಬಂದಂತಾಯಿತು; ಪ್ರೇಮಾ ಹೊರಳಿ ನೋಡಿದಳು; ಅವಳ ತಾಯಿ ಕಲಾವತಿಬಾಯಿ. ''ನನಗೊತ್ತದ, ನಿನ್ನ ಬಿ. ಎ. ಮುಗಿಯೋತನಕಾ ನಿನಗ ತ್ರಾಸ ಕೊಡಬಾರ್ದು ಅಂತ. ಇವೊತ್ತ ಒಂದ ದಿವಸ ಬಾ. ಇನ್ನು ಮುಂದ ಪರೀಕ್ಷಾ ಮುಗದ ಮ್ಯಾಲೆ ನಾ ಹೇಳೋ ತನಕಾ ನನ್ನ ಮನೀಒಳಗ ಕಾಲು ಹಾಕಬ್ಯಾಡ್ರೀ ಅಂತ ಆ ರಂಗರಾಯರಿಗೆ ಹೇಳಿಬಿಡ್ತೇನಂತ, ಬಾ ಕೂಸ...''

''ಅವ್ವಾ, ಈಗ ದೇವಾ ಅಂತ ಇಂಟರ ಆಗೇದ. ಬಿ. ಎ. ಆಗೋದು ಈಗಿನ ದಿವಸಕ್ಕ ಅಂದ್ರ ಏನ ಸಣ್ಣ ಮಾತಲ್ಲಾ. ಸ್ವಲ್ಪ ಶಾಂತರೀತಿಯಿಂದ ವಿಚಾರಮಾಡಿ ನೋಡು. ಕಲೀ ಅಂದ್ರ ಕಲೀತೇನಿ, ಬ್ಯಾಡಾಂದ್ರ ಹಾಂಗ ಹೇಳಿ ಬಿಡು–ಇವೊತ್ತ ಮರ್ಯಾದೀ ಬಿಟ್ಟು ನೀ ಹೇಳಿದ್ಹಾಂಗ ಕೇಳಿಕೋತ ಇರ್ತೇನಿ......'' ಕಲಾವತಿಯು ನಡುವೇ ಬಾಯಿಹಾಕಿ ಎಂದಳು: ''ಥೇ..ಥೇ..ನಮ್ಮವ್ವಾ, ಕಲಿಯೋದು ಬಿಡಿಸಲಿಕ್ಕಿಲ್ಲ ಬಿಡು ನಿನ್ನ. ನಿನ್ನ ಶೀಲಕ್ಕೂ ಯಾವ ಪರಿಯಿಂದಸೂ ಧಕ್ಕ್ಯಾಗಗೊಡಲಿಕ್ಕಿಲ್ಲಾ; ನೆನಪಿಡು. ಸುಮ್ಮನ ಥೊಡ್ಡ ಮನುಷ್ಯರು, ಅವರ್ನ ಕಾಯಕೊಂಡು ಹೋಗಬೇಕೂ ಅಂತ ನನ್ನ ಅಂಬೋಣ..''

ಪ್ರೇಮಾ ''ಆಗಲಿ ಬರ್ತೇನಿ ನಡಿ'' ಎಂದು, ಹುಡಿಯಾದ ಕೂದಲುಗಳನ್ನು ಸರಿಪಡಿಸಿಕೊಂಡು, ಮುಖತೊಳೆದುಕೊಂಡು, ''ಥೊಡ್ಡ ಮನುಷ್ಯರಂತ! ಕಾಯ್ಕೋಬೇಕಂತ!! ಇಲ್ಲೇ ವ್ಯಕ್ತ ಆಗ್ತದ ನಮ್ಮ ಅವ್ವನ ಕೀಳ ಅತ್ಯಾಶೇದ ಗುಣಾ!....'' ಎಂದು ವಟಗುಡುತ್ತ ಕೆಳಗಿಳಿದು ಬಂದಳು.

ಕೆಳಗಿನ ಮನೆಯ ಸಿಂಗರಿಸಿದ ಒಂದು ದಿವಾಣಖಾನೆಯಲ್ಲಿ ಓರ್ವ ಶ್ರೀಮಂತ ಮನೆತನದ ಎಪ್ಪತ್ತು ವರ್ಷದ ಮುದುಕನು ಇವಳಿಗಾಗಿ ಕಾದಿದ್ದನು. ಇವಳನ್ನು ನೋಡಿದೊಡನೆ, "ಹ್ಹ..ಹ್ಹ..ಬಾ.. ಪ್ರೇಮಾ..ನಿನ್ನ ದರ್ಶನಾ ಅಂದ್ರ ದೇವರದs ನೋಡು..ಹ್ಹ..ಹ್ಹ.. ಹ್ಹ..ಹ್ಹ.... "

ಪ್ರೇಮಾ ಮರುಮಾತೆತ್ತದೆ ಒಂದು ಚುಟಿಕೆ ವೀಣೆಬಾರಿಸಿ ಎದ್ದಳು. ನರೆತ ಜುಟ್ಟದ ತಲೆಯನ್ನು ತೂಗುತ್ತ ವೀಣೆಯ ನಿನಾದದಲ್ಲಿ ಇದುವರೆಗೆ ತಲ್ಲೀನನಾಗಿದ್ದ ಮುದುಕ ಒಮ್ಮೆಲೇ ಮೇಲಕ್ಕೆ ನೋಡಿ, "ಏನು, ಮುಗೀತ? ಎದ್ದು ಹೊರಟ್ಯಾಕ? ಬಾ, ಇಲ್ಲೆ ಬಂದರ ಬಾ. ನಿನ್ನ ಸಲುವಾಗಿ ಎಂಟುನೂರು ರೂಪಾಯಿ ಕಿಮ್ಮತ್ತಿನ ಮುತ್ತಿನ ಹಾರಾ ತಂದೇನಿ, ನೋಡಿಲ್ಲೆ. "

"ನನಗ ಅದು ಬ್ಯಾಡಾ. ವೀಣಾ ಕೇಳ್ಳಿಕ್ಕೆ ಬಂದಿದ್ರಿ, ಬಾರಿಸಿದೆ, ಹೋಗ್ತೇನಿನ್ನ."

"ಅಂ, ಬರೇ ವೀಣಾ ಕೇಳ್ಳಿಕ್ಕೇನು? ನಿನ್ನ ಪ್ರೇಮಭಿಕ್ಷಾ....',

"ಸ್ವಲ್ಪ ಎಚ್ಚರದಿಂದ ಮಾತಾಡ್ರಿ, ರಂಗನಾಥರಾವ. ನನ್ನಜ್ಜ ನಷ್ಟು ವಯಸ್ಸಾಗೇದ ನಿಮಗ, ಸ್ವಲ್ಪೇನರ ನಾಚಿಗೆಂಬೋದು..!"

"ಹ್ಹ..ಹ್ಹ....ನಾಚಿಗೇನ ಅದರೊಳಗs, ಸ್ವಲ್ಪ ಹತ್ರ ಬಂದರ ಬಾ; ಈ ಹಾರಾ ಕೈಯೊಳಗ ತಗೊಂಡು ನೋಡೆರ ನೋಡು; ಹಾಂಗ ಸಿಟಗೊಬ್ಯಾಡಾ. ಮತ್ತೇನ ಬೇಕು ಬಾಯಿಬಿಚ್ಚಿ ಹೇಳಿದ್ರ ತಂದೇನೊ..ನನಗ ಮಾತ್ರ ನಿನ್ನ ಪ್ರೀತಿ...."

"ಪ್ರೇಮ-ಪ್ರೀತಿ ಬೇಕಾದ್ರ, ಮನೀಗೆ ಹೋಗ್ರಿ. ಖರೇ ಪ್ರೇಮ, ಖರೇ ಪ್ರೀತಿ, ಅಂತಃಕರುಣಾ ಅಂಬೋದು ಮನೀವಳಗ ಧರ್ಮಪತ್ನೀ ಹತ್ರ ಸಿಗತಿರತದ; ಸೂಳೇರ ಹತೀಲೆ ಸಿಗತಿರೂದುಲ್ಲಾ. ಸೂಳೇರೂ ಅಂದ್ರ, ನೀವೆಷ್ಟು ರೊಕ್ಕಾ ಸುರುವತೀರ್‍ಯೊ, ಅಷ್ಟಷ್ಟು ಪ್ರೇಮ ನಿಮಗ ಮಾರಲಿಕ್ಕೆ ಕೊಡಾವ್ರು...."

"ಇಲ್ಲಿ, ಬಾ, ಬಾರ ಹುಡಿಗೀ. ನಾಲೀ ಕಲ್ತೀದೆಂತ ನಿನಗ ತಿಳಿಯುದ ಮಾತಿನೊಳಗ ನನಗ ಬುದ್ದೀ ಹೇಳಬ್ಯಾಡಾ. ನಿನ್ನಂಥವರ್‍ನ ಬೇಕಾದಷ್ಟು ಹುಡಿಗೇರ್‍ನ ಕಿಸೆದೊಳಗ ಹಾಕೇನಿ ಬಾ.."

ಸ್ನೇಹದ ಶರ್ಸ

"ಹೌದಲ್ಲೊ, ಇಲ್ಲೆ ನೋಡ್ರಿ ಸರಾಫರ, ನನ್ನಂಥಾ ಎಷ್ಟು ಎಳೇ ಕಂಡಮ್ಮಗಳ ಗೋಳಕಟ್ಟಿಕೊಂಡು ಬಂದಿರೋ..ನನ್ನ ಮ್ಯಾಲೆ ಈಗ ಪಂಚಸಾ ಮಾಡಬಯಸಿ. ಆ ನೆರೆಮನೀ ಮುಕ್ತ್ಯಾನ್ನ ಕುತ್ತಿಗೀ ಕೊಯ್ದು ಬಂದೀರೆಂಬೋದು ನನಗ ಗೊತ್ತಿಲ್ಲಂತ ತಿಳಿದೀರ್ಯಾ?.."

"ನಿನ್ನ ಸಂಗತೀ ಹಾಂಗ ಮಾಡುದುಲ್ಲಾ, ನೋಡು.. ಪ್ರೇಮಾ.."

ಮುದುಕನು ಮಾನಾಪಮಾನಗಳನ್ನು ಗಂಟುಕಟ್ಟಿಟ್ಟನು. ಅವಳೀನೆಂದು ಉಗುಳಿದರೂ ಉಗುಳಿಸಿಕೊಳ್ಳಲು ಗಟ್ಟಿಯಾದನು. ಅವಳ ಕೈಹಿಡಿಯಹೋದನು. ಅವಳು: "ಹಾ, ತಡೀರಿ, ನನ್ನ ಮ್ಯಾಲೆ ನಿಮ್ಮದೂ ಪ್ರೇಮಿದ್ದದ್ದ ಖರೇ ಇದ್ರ...." ಅಧೀರ ಕಾಮುಕನು ನಡುವೇ ಬಾಯಿಹಾಕಿ, "ಖರೇ ಅಂದ್ರ್ಯಾ ಅದ.." ಎಂದನು. ಆಗ ಪ್ರೇಮಾ "ಹೌದಲ್ಲೊ, ಹಾಂಗಾರ ನನ್ನ ಲಗ್ನಾ ಮಾಡಿಕೊಂಡಬಿಡ್ರೀ. ಅಂದ್ರ ಲಗೂನ ಶುದ್ಧಾಗಿ ನಿಮ್ಮ ಉತ್ಪನ್ನ ಉಣಕೋತ ಆನಂದದಿಂದಿರತೇನಿ..ಇಲ್ಲಿದ್ರ ಸಕೇಶಾಗಿ ಸ್ವಲ್ಪ ದಿವಸಿದ್ದುಕೊಂಡು, ಮತ್ತ ಹ್ಯಾಂಗೂ ಪುನರ್ವಿವಾಹದ ದಿವಸಾ ಬಂದಾವ, ಯಾವನ್ನರ ಲಗ್ನಾ ಮಾಡಿಕೊಂಡು ಸುಖದಿಂದಿರತೇನಿ" ಎಂದಳು.

ಈವರೆಗೆ ಮದಾಂಧತೆಯಿಂದ ಹುಚ್ಚೆದ್ದು ಕುಳಿತ ರಂಗನಾಥರಾಯನು, ಎಚ್ಚರವಾಗಿ ಸಂತಾಪದಿಂದ ಚಡಪಡಿಸುತ್ತ, "ಎಲೇ, ಪ್ರೇಮಾ, ಸ್ವಲ್ಪ ಎಚ್ಚರದಿಂದ ಮಾತಾಡು. ನಾ ಈ ಊರೊಳಗಿನ ದೊಡ್ಡ ಸಾವುಕಾರಿದ್ದೇನಿ. ನನ್ನ ಮುಂದ ನಿಂತು ಸಿಕ್ಕ್ಹಾಂಗ ಬೊಗಳಲಿಕ್ಕೆ ನೀ ಎಷ್ಟರಾಕಿ? ನಿನ್ನ ಕಿಮ್ಮತ್ತೇನು, ನೀಯೇನು?.."

"ಅಂಥಾ ಕಿಮ್ಮತ್ತುಗೇಡಿ ಹೆಂಗಸಿನ ಮುಂದ ಭಿಕ್ಷಾ ಬೇಡೋ ನೀವೆಷ್ಟು ಕಿಮ್ಮತ್ತವಂತರು? ಸಾವಿರ ಮಂದಿ ಕೀಳು ವೇಶ್ಯೆಯರ್ನ ಮೋಸಗೊಳಿಸಿಗೋತ, ಮುದುಕರಾದ ನಿಮ್ಮ ಯೋಗ್ಯತೆ, ನಿಮ್ಮ ಮರ್ಯಾದಿ ಎಷ್ಟರಮಟ್ಟಿಗೆ ಹೆಚ್ಚಿನದಿದ್ದೀತೂ ನೋಡಿಕೊಳ್ರಿ. ಇದೆಲ್ಲಾ, ನಿಮ್ಮ ಹಣದ ಸೊಕ್ಕು! ಹಂದಿ ಮುಪ್ಪಾದರೇನು, ತನ್ನ ಹುಟ್ಟು ಗುಣಾ ಬಿಟ್ಟೀತೇನು?"

"ಏ, ಎಷ್ಟು ಮಾತಾಡತೀದೇ, ಒಬ್ಬ ವೇಶ್ಯಾನ ಪೋರಿ ಆಗಲಿಕ್ಕಿಲ್ಲಾ.."

"ರಂಗನಾಥರಾವ, ನಾನೂ ಹೇಳ್ತೇನಿ.. ನಿಮ್ಮ ಮಾನಾ ಮರ್ಯಾದಿ ಇದ್ದದ್ದಷ್ಟು ಕಾಯಕೊಂಬೋದಿದ್ರ ಎದ್ದೇಳ್ರಿ ಇಲ್ಲಿಂದ..!!" "ಹೋಗತೇನೇ ಮಾರಾಯತಿ, ಎಷ್ಟು ಬಾಯಿಬಿಡತೀದಿ.." "ಒರೇ ಏಳೂದಲ್ಲಾ, ಇನ್ನೊಮ್ಮೆ ಇಲ್ಲೆ ಕಾಲ ಹಾಕೋದುಲ್ಲಂತ ಆಣೀ ಮಾಡಿ ಏಳ್ರಿ!!" ಅವಳನ್ನೇ ದುರುಗುಟ್ಟುತ್ತ ನೋಡಿ ಮುದುಕ ಕಲಾವತಿಗೆ ಕೂಡ ಹೇಳದೆ ಕೇಳದೆ ಓಟಕಿತ್ತನು. ಎಂಟು ನೂರು ರೂಪಾಯಿ ಬೆಲೆಬಾಳುವ ಹಾರದ ನೆನಪು ಸಹ ಹಾರಿಹೋಗಿತ್ತು. ಪ್ರೇಮಾ ಅಲ್ಲಿಂದೆದ್ದು ತನ್ನ ಕೋಣೆಗೆ ಓಡಿಬಂದು 'ಉಶ್ಶೆಂದು' ಆರಾಮಕುರ್ಚಿಯೊಂದರಲ್ಲಿ ಬಿದ್ದುಕೊಂಡು, ಪರಮಾತ್ಮನನ್ನು ಕೊಂಡಾಡಹತ್ತಿದಳು.. ಚಿತ್ತವು ಎದುರಿಗಿದ್ದ ಗೀತಾಂಜಲಿಯ ಕಡೆಗೆ ಹರಿಯಿತು. ಕೈಯಲ್ಲಿ ತೆಗೆದುಕೊಂಡು ಪುಟಗಳನ್ನು ಮಗುಚ ಹತ್ತಿದಳು.

"ಬಾಯಿಸಾಹೇಬ ...."

ತನ್ನ ಪ್ರೀತಿಯ ದಾಸಿಯ ಧ್ವನಿಯನ್ನು ಕೇಳಿದೊಡನೆ, ಪ್ರೇಮಾ ಫಕ್ಕನೆ ಎಚ್ಚತ್ತಳು. ಶಾಂತೆಯು ಅವಳ ಮುಂದೆ ಚಹದ ಕಪ್ಪನ್ನು ಇಟ್ಟು ಹೋದಳು. ಮುಖ ತೊಳೆದುಕೊಂಡು ಚಹ ಕುಡಿದು, ಹೊರಗೆ ಹೊರಡಲನುವಾಗಿ ಎದ್ದಳು. ಮುಂಜಾನೆಯ ಪ್ರಸಂಗದಿಂದ ಅವಳ ತಲೆಗೆ ಒಳ್ಳೆಯ ತಾಪವಾಗಿದ್ದಿತು. ಒಬ್ಬೊಂಟಿಗಳಾಗಿ, ಕಾಲ್ನಡಿಗೆಯಿಂದ ದೂರದೂರ ಅಡ್ಡಾಡಿಕೊಂಡಾದರೂ ಬರೋಣವೆಂದು ಅರಿವೆಗಳನ್ನು ಒದಲಾಯಿಸಿದಳು. ಒಬ್ಬಳೇ ಹೊರಬಿದ್ದುದನ್ನು ನೋಡಿ ಅವಳ ತಾಯಿಯು "ಪ್ರೇಮಾ, ಇಷ್ಟು ಸಂಜಿಮಾಡಿ ಒಬ್ಬಾಕಿನ ಹೊರಗ ಹೋಗಬ್ಯಾಡಾ. ಕಾರ ತಗೊಂಡರ ಹೋಗು. ಇವೊತ್ತು ಮಳೀ ಲಕ್ಷಣ ಕಾಣಸ್ತದ. ಗುಡಗು ಮಿಂಚಿನ ಆರ್ಭಟಾನರ ನೋಡು." ಎಂದು ಎಚ್ಚರಪಿತ್ತರೂ ಪ್ರೇಮಾ ಲಕ್ಷಿಸದೆ ಹೊರಟುಬಿಟ್ಟಳು. "ಏನ ಹುಡಿಗೆವ್ವಾ, ಇತ್ತಿತ್ಲಾಗ ಹಿಂಗ್ಯಾಕ ಮಾಡತಾಳೋ ಏನೋ. ಫಕ್ನ ಏನಾರ ಹೆಚ್ಚೂಕಡಿಮೆ ಮಾತಾಡಿದ್ರೂ, ಕಠಿಣ–ನಾಜೂಕ ದಿವಸ ಈಗಿನವೂ–ಮನಸೀಬಿಟ್ಟು ಓಡಿದ್ರ, ಭಾಂವೀ ಕೆರೀ ಪಾಲಾದ್ರ ಏನ್ಮಾಡಲಿ?

೮೦ ಗ ವ ಲ್ಲಿ

ಇಷ್ಟು ದಿವಸ ಸಾಕಿ ಸಲುಹಿ ಥೊಡ್ಡಾಕಿನ್ನ ಮಾಡಿದ್ದೆಲ್ಲಾ ಹೊಳೀ ಯೊಳಗ ಹುಣಶೀಹಣ್ಣು ತೊಳದ್ಹಾಂಗಾದೀತು .... ಆಕೀ ಮನಸು ಸಾಧಾರಣ ನನಗ ತಿಳದ್ಹಾಂಗಾಗೇದ. ಆಕೀಗೆ ಈ ವೇಶ್ಯಾ ವೃತ್ತಿ ಬ್ಯಾಡಾಗೇದ. ಬಿಟ್ಟುಬಿಡವಳ್ಹ್ಯಾಂಕ, ಯಾರಿಗೇರ ಲಗ್ನಾ ಮಾಡಿಕೊಟ್ರಾತು....ಎಲ್ಲಾ ಖರೇ, ನನ್ನಂಥಾ ವೇಶ್ಯಾನ ಮಗಳ್ನ ಮಾಡಿಕೊಂಬೋ ಮನುಷ್ಯಾ ಸಿಕ್ಯಾಗ ಖರೆ. ಅಷ್ಟೊಂದು ಪುಣ್ಯಾ ಬೇಕಲ್ಲ....ನಮ್ಮ ನಮ್ಮ ಕರ್ಮಾ-ದೈವಾ ಕೂಡೇದ ಆತು ಎಲ್ಲಾ ಮಾತು'' ಹೀಗೆಲ್ಲ ಪಟಗುಡುತ್ತ ತನ್ನ ಕೋಣೆ ಸೇರಿದಳು.

ಇತ್ತ ಪ್ರೇಮಾ ಒಬ್ಬಳೇ ಕಾಲು ಸೆಳೆದೊಯ್ದತ್ತ ದೂರದೂರ ವಾಗಿ ನಡೆದುಕೊಂಡು ಸಾಗಿ, ಸಮುದ್ರದ ದಂಡೆಗೆ ಬಂದಳು. ಕ್ಷಣ ಹೊತ್ತು ಅಲ್ಲಿ ವಿಶ್ರಮಿಸಲೆಂದು ಕುಳಿತಳು. ಸುಮಾರು ಅರ್ಧ ಗಂಟೆಯ ವರೆಗೆ ಆ ಪ್ರಶಾಂತ ಸ್ಥಳದಲ್ಲಿ ಏನನ್ನೋ ವಿಚಾರಿಸುತ್ತ ಅವಳು ಕುಳಿತಿ ದ್ದಳು. ಥಡಲ್ಲೆಂದು ಒಂದು ತೆರೆಯು ಬಂದು ದಂಡೆಗೆ ಬಡಿದು ಹೋಯಿತು. ಕೂಡಲೆ '' ಸರಿ, ಬಿ. ಎ. ಆಗೋತನಕಾ ಅಪ್ಪನ ಹತ್ತರ ಇರೋದು. ಮುಂದ ನನಗ ಲಗ್ನಾ ಮಾಡಿದ್ರೂ, ಆಕೆನ್ನ ಸಂಭಾಳಿಸಿ ಗೊಂಡು ಅಲ್ಲೇ ಇರ್ತೇನಿ. ಇಲ್ಲಾಂತು ನಿನ್ನ ಹಾದಿ ನಿನಗ ನನ್ನ ಹಾದಿ ನನಗ ಅಂತ ಸ್ಪಷ್ಟ ಹೇಳೋದು, ಮತ್ತ ನನ್ನ ಕಾಲಮ್ಯಾಲೆ ನಾನು ನಿಂತು, ನನ್ನ ಹಾಂಗ ಹಿಂಡಕ ಬಿದ್ದ ನನ್ನ ಅಕ್ಕತಂಗಿಯರ್ನ ಅಡ್ಡ ಮಾರ್ಗ ಬಿಡಿಸಿ, ಸರಳ ಮಾರ್ಗಕ್ಕ ಹಚ್ಚಲಿಕ್ಕೆ ಪ್ರಯತ್ನಿಸೋದು. ಇದರೊಳಗ ನನಗ ಖರೇ ಸುಖಾ, ಖರೇ ಆನಂದ ಅದ. ಇದ ನನ್ನ ಕಡೀ ನಿರ್ಧಾರ, ಖಂಡಿತ!! '' ಎಂಬ ಮಾತು ಪ್ರೇಮಾನ ಬಾಯಿಯಿಂದ ಫಕ್ಕನೆ ಹೊರಬಿದ್ದಿತು. ಮೇಘರಾಜನು ಅವಳ ವಿಚಾರವನ್ನು ಅನು ಮೋದಿಸಿದನೋ ಎಂಬಂತೆ ಗಟ್ಟಿಯಾಗಿ ಗರ್ಜಿಸಿದನು. ವಾಯು ದೇವನು ಅವಳ ಈ ಸುವಿಚಾರವನ್ನು ಇಡಿಯ ವಿಶ್ವದಲ್ಲೆಲ್ಲ ಹರಡಲು ಹೊರಟನೇನೋ ಎನ್ನುವಂತೆ, ಒಲು ಕನುವಿನಿಂದ ಬೀಸತೊಡಗಿದನು. ಹನಿಯೊಡೆಯಿತೆನ್ನುವಷ್ಟರಲ್ಲಿ ಮಳೆಗೆ ಆರಂಭವಾಗಿಬಿಟ್ಟಿತು.

ಪ್ರೇಮಾ ಗಾಬರಿಯಾಗಿ ಎದ್ದಳು. 'ಕ್ವಿಕ್ ಮಾರ್ಚ' ಆರಂಭವಾ

೧೪೬ ಯಿತು. ಗುಡುಗು ಮಳೆಗಳೂ ಅವಳೊಡನೆ ಸ್ಪರ್ಧೆ ನಡೆಸಿರುವವೇನೋ

ಎಂಬಂತೆ, ಇನ್ನಿಷ್ಟು ತಮ್ಮ ಕಸುವನ್ನು ತೋರಿಸಹತ್ತಿದವು. ಅತ್ತಿಣಿಂದ ವಾಯುವು ಬಂದು ಪ್ರೇಮಾಳ ಕೈಯೊಳಗಿನ ಕೊಡೆ ಮತ್ತು ವಸ್ತ್ರಗಳನ್ನು ಕಸಿದುಕೊಂಡು ಓಡಿಬಿಟ್ಟನು. ಪಾಪ, ಹುಡಿಗೆ ಈಗ ಸಂಪೂರ್ಣ ನಿರಾಧಾರಳಾದಳು. ಹಿಂದೆ ನೋಡುತ್ತ ಮುಂದೆ ಓಡಲಾರಂಭಿಸಿದಳು. ಸಿಡುಗುತ್ತಲೆ; ಗುಡುಗು ಮಿಂಚು ಮಳೆಗಳು; ಮೈಯೆಲ್ಲ ತಪ್ಪನೆ ತೊಯ್ದುಬಿಟ್ಟದ್ದರಿಂದ ಅವಳಿಗೆ ಚಳಿಯ ಮೂಲಕವೂ, ಒದ್ದೆ ಅರಿವೆಗಳ ಮೂಲಕವೂ ಬೇಗ ಬೇಗ ಕಾಲು ಕೀಳಲಾಗಲೊಲ್ಲದು. ಜೊತೆಗೆ ಯಾರಾದರೂ ಇದ್ದಿದ್ದರೆ ಒಳಿತಾಗುತ್ತಿತ್ತು, ಎಂದೆನ್ನಿಸಿತವಳಿಗೆ. ಇನ್ನೂ ಹತ್ತು ಹೆಜ್ಜೆ ಮುಂದೆ ಸಾಗುತ್ತಿರುವಷ್ಟರಲ್ಲಿ, ಮೈತುಂಬ ಓವ್ಹರ ಕೋಟನ್ನು ಧರಿಸಿದವರಾರೋ ಬೂಟುಗಾಲಿನಿಂದ ತನ್ನನ್ನು ಹಿಂಬಾಲಿಸಿ ಬರುತ್ತಿರುವರೆಂಬುದನ್ನು ಕಂಡಳು; ಗಾಬರಿಯಾದಳು. "ದೇವರೆ, ಯಾವನೊಬ್ಬ ಪರಾಣಾ ಬ್ಯಾರೆ ಇರಲಿಕ್ಕಿಲ್ಲಷ್ಟ?...." ಎನ್ನುತ್ತಿರುವಷ್ಟರಲ್ಲಿ ಆ ಗಟ್ಟಿಗನು ಎದುರುಬಂದು ನಿಂತವನೇ ಫಕ್ಕನೆ ಬ್ಯಾಟರಿಯನ್ನು ಅವಳ ಮುಖಕ್ಕೆ ಹಿಡಿದನು. ಪ್ರೇಮಾ ಚಿಟ್ಟನೆ ಚೀರಿ ನೆಲಕ್ಕೆ ಕುಳಿತಳು. "ಓಹೋ ಪ್ರೇಮಾ ಏನು? ಇಷ್ಟು ಹೆದರಲಿಕ್ಕೇನಾತೂ, ಸುಖರೂಪವಾಗಿ ನಿನ್ನ ಮನೀಗೆ ಮುಟ್ಟಿಸಿಬಿಡ್ತೀನಿ, ನಡೀಯಲ್ಲಾ...."

ಪ್ರೇಮಾಗೆ ಪರಿಚಯದ ಧ್ವನಿಯನ್ನು ಕೇಳಿದ ಕೂಡಲೇ ಸ್ವಲ್ಪ ಸಮಾಧಾನವಾಯಿತು. "ಶಶಿಧರಾ, ಒಡಹುಟ್ಟಿದವರಕಿಂತಾನೂ ಹೆಚ್ಚಾಗಿ ಎಲ್ಲಿ ಹೋದ್ರೂ ನನ್ನ ಬೆನ್ನಾಸರಾಗಿ ಇದ್ದss ಇರ್ತೀದೆಲ್ಲಾ! ದೇವದೂತ ನೋಡು ನೀ ಒಬ್ಬಾವಾ ನನ್ನಪಾಲಿಗೆ....' ಶಶಿಧರನು ಕೊಟ್ಟ ಕೊಡೆಯನ್ನು ಹಿಡಿದುಕೊಂಡಳು. ಇಬ್ಬರೂ ಹರಟೆ ಹೊಡೆಯುತ್ತ ಟ್ರಾಮಿನ ನಿಟ್ಟನ್ನಿಟ್ಟುಕೊಂಡು ಸಾಗಿದರು. ಟ್ರಾಮು ಬಂದೊಡನೆ ಅವಳಿಂದ ಚತ್ತರಿಗೆಯನ್ನಿಸಿದುಕೊಂಡು "ಪ್ರೇಮಾ, ನೀನು ಟ್ರಾಮಿನಿಂದ ಮನೀಗೆ ಹೋಗು, ನಾನು ನಡಕೊಂಡೇ ನನ್ನ ದಾರೀ ಹಿಡಿತೇನಿ" ಎಂದನು ಶಶಿಧರನು. "ಹೀಂಗೇನು, ಶಶಿಧರಾ, ಒಂದು ದಿವಸಾರ ನಮ್ಮ ಮನೀಗೆ ಬಾ. ಈಗss ಬಾ, ಚಹಾ ತಗೊಂಡು ಮಳೀ

೧೮ ಗ ವ ಲ್ಲಿ

ನಿಂತ ವ್ಯಾಲೆ ಹೋಗೀಯಂತ. . . ." ಶಶಿಧರನಿಗೆ ಮನಸ್ಸಿಲ್ಲದಿದ್ದರೂ, ಚಹಪಾನದೊಡನೆ ನಿರ್ವಾಹವಿಲ್ಲದೆ ಟ್ರಾಮು ಹತ್ತಬೇಕಾಯಿತು.

ಕತ್ತಲಾದರೂ ಇನ್ನೂ ಮನೆಗೆ ಮಗಳು ಬಾರದಿದ್ದುದಕ್ಕಾಗಿ ಕಲಾವತಿಬಾಯಿಯು ಚಡಪಡಿಸುತ್ತ ಬಾಗಿಲಲ್ಲಿಯೇ ಚಳಿ-ಮಳೆಯೆನ್ನದೆ ನಿಂತುಬಿಟ್ಟಿದ್ದಳು. ಪ್ರೇಮಾನ್ನ ನೋಡಿದೊಡನೆಯೆ ಪ್ರೀತಿಯಿಂದ: "ಬಂದ್ಯಾ, ನನ್ನ ಕಂದವ್ವಾ. ಹೊರಟಾಗನ ಹೇಳ್ಲಿಲ್ಲ ನಾನು, ಒಬ್ಬಾಕಿನ ಹೋಗಬ್ಯಾಡಾಂತ? ತೊಯ್ಸಿಗೊಂಡು ಬಂದೀ ಹೌದಲ್ಲೊ? ಏ ಶಾಂತಾ, ಈಕಿಗೆ ಮೊದಲಷ್ಟು ಒಣಾ ಅರವೀ ಕೊಡು. .?"

"ಅದೆಲ್ಲಾ ಇರಲಿ, ಸ್ವಲ್ಪ ಉತ್ತಮ ಚಹಾ ಮಾಡಿಕೊಂಡು ಎರಡು ಕಪ್ಪ ವ್ಯಾಲೆ ತಗೊಂಡು ಬಾರs ಶಾಂತಾ. ." ಎನ್ನುತ್ತ ಪ್ರೇಮಾ ಅಟ್ಟವನ್ನೇರತೊಡಗಿದಳು. ಬೆದರಿದ ಮನಸ್ಸಿನಿಂದ ಸ್ವಲ್ಪ ಹಿಂದೆ ಮುಂದೆ ನೋಡುತ್ತಲೆ ಶಶಿಧರನೂ ಅವಳನ್ನು ಹಿಂಬಾಲಿಸಿ ಅವಳ ಕೋಣೆಗೆ ಬಂದನು. ಮುದುಕಿಯು ಹೀಗೆ ಬಾಗಿ ಮಗಳೊಡನೆ ಬಂದ ತರುಣನನ್ನು ನೋಡಿ ಸ್ವಲ್ಪ ಸೋಜಿಗಗೊಂಡಳು. ಪ್ರೇಮಾ ತಾನು ಅರಿವೆಗಳನ್ನು ಬದಲಾಯಿಸಿ ಬರುವವರೆಗೆ ಶಶಿಧರನಿಗೆ ಅಲ್ಲಿಯೇ ಕುಳಿತಿರ ಹೇಳಿ ಹೋದಳು. ಅವಳು ಬರುವವರೆಗೆ ಅವನಿಗೆ ಅಲ್ಲಿ ಸುಮ್ಮನೆ ಕೂಡಲಾದೀತೇ? ಹತ್ತೆಂಟು ನಿಮಿಷಗಳಲ್ಲಿ ಅವಳ ಕೋಣೆಯೆಲ್ಲವನ್ನು ತಿರುವಿಹಾಕಿದನು. ಅಲ್ಲಿಯ ರೀತಿ-ರಿವಾಜುಗಳಿಂದ, ಪ್ರೇಮಾನ ಸುಸಂಸ್ಕೃತ ಜೀವನದ ಪರಿಚಯವಾಯಿತವನಿಗೆ. ಅಷ್ಟರಲ್ಲಿ ಶಾಂತೆಯೊಡನೆ ಪ್ರೇಮಾ ಮೇಲಕ್ಕೆ ಬಂದಳು. ಪ್ರೇಮಾನಿಂದಲೇ ಮಾತಿಗೆ ಮೊದಲಾಯಿತು. "ಶಶಿಧರಾ, ನಮ್ಮನೀ ಮೆಟ್ಟಲು ಹತ್ತಿ ಬರಲಿಕ್ಕೆ ಹಿಂದು ಮುಂದ ನೋಡಿದವರೊಳಗ ನೀ ಒಬ್ಬನs ನೋಡ. ನನ್ನ ಈ ೨೦-೨೨ ವಯಸಿನ ಅವಧೀಯೊಳಗ ನಿನ್ನ ಒಬ್ಬಾಂವನ್ನ ಮರ್ಯಾದಿಸ್ಥಂತ ಕಂಡ ಹಿಡದೇನಿ. ನೋಡಿದ್ರ ಕಾಲೇಜದೊಳಗಿನದs ನನ್ನ-ನಿನ್ನ ಪರಿಚಯ."

ಶಶಿಧರನು ಮೊದಲೇ ಬೆದರಿ ಕಕ್ಕಾವಿಕ್ಕಿಯಾಗಿದ್ದನು. ಗಟಗಟನೆ
೧೪೮ ಎಸರುಚಹವನ್ನು ಕುಡಿದು ಎದ್ದೇ ಬಿಟ್ಟನು. "ಶಶಿಧರಾ, ಇನ್ನೊಮ್ಮೆ

ಯಾವಾಗಾರ ಸ್ವಲ್ಪ ನಿಧಾನಾಗಿ ನನ್ನ ಮನೀ ಕಡೆ ಬರ್ತೀಯಾ ? " ೧೪೯
ಎಂದು ಪ್ರೇಮಾ ಕೇಳಿದಳು.

" ಪ್ರೇಮಾ, ಮ್ಯಾಲಿಂಡಮ್ಯಾಲೆ ನಿನ್ನ ಮನೀಕಡೆ ಬರಹೋಗೋ ಪರಿಪಾಠಾ ಇಟ್ರ ಜನರು ನನಗೇನಂದಾರು ? " ಎಂದು ಹೇಳಲು ಮನಸ್ಸಿಲ್ಲದಿದ್ದರೂ, ಶಶಿಧರನ ಬಾಯಿಯಿಂದ ತಟ್ಟನೆ ಹೊರಬಿದ್ದಿತು.

ಪಾಪ, ಪ್ರೇಮಾನ ಕಣ್ತುಂಬ ನೀರು ತುಳುಕಹತ್ತಿತು. ಪ್ರಾಣದಾನವನ್ನು ಬೇಡಬಯಸುವ ಹರಿಣಿಯಂತೆ, " ಆಗಲಿ, ನಾಯೇನು ನಿನಗ ಬಂದs ತೀರಪಾ ಅಂತ ಆಗ್ರಹ ಮಾಡೂದಿಲ್ಲಾ. ಈಗೆರಡು ಸಾರೆ, ಅದರೊಳಗ ಇವೊತ್ತಿನ ದಿವಸ ನನ್ನ ಸಂಕಟದೊಳಗಿಂದ ಪಾರು ಮಾಡಿದೀ. ನೀನು ನಿಜವಾದ ಮಾನವಂತ ಇದ್ದೀಯಂತ ನನಗ ತಿಳದು ಬಂತು. ಯಾಕಂದ್ರ ನಮ್ಮಲ್ಲೆ ಬರಲೊಪ್ಪದ ಜನರು ತೀರ ವಿರಳ. ನನ್ನ ಬಾಳೇನು, ನೀರೊಳಗಿನ ಮೀನಿನ್ಹಾಂಗ–ಕುಡದ್ರೂ ಬಂತು ಕುಡಿಯುದಿದ್ರೂ ಬರೋದs ನನ್ನ ಪಾಲಿಗೆ ಅಪಕೀರ್ತಿ. . . . ಅದಕ್ಕ ಏನೋ ನನ್ನ ಮ್ಯಾಲೆ ಸಂಕಟದ ವ್ಯಾಳ್ಯಾ ಬಂದ್ರ, ಒಂದು ಚೀಟೀ ಕಳಿಸಿ ಬೇಡಿಕೊಂಡ್ರ, ನಿನ್ನೊಬ್ಬ ಅನಾಥ ಭಗಿನೀ ಮರ್ಯಾದೀ ಉಳಸಲಿಕ್ಕೆ ಒಂದು ಘಳಿಗಿ ಬಂದ ಹೋಗಲಿಕ್ಕೆರs ಮರಿಬ್ಯಾಡಾ–ಇಷ್ಟ ನಾ ಬೇಡಿಕೋತೇನಿ ನಿನಗ. "

" ಅನಾಥ ಭಗಿನಿ "ಯೆಂಬ ಶಬ್ದವು ಕಿವಿಗೆ ಬಿದ್ದೊಡನೆ ಶಶಿಧರನ ಕರುಳು ಕರಗಿ ನೀರುನೀರಾಯಿತು; ಅವಳಿಗಾಗಿ ಮನಮರುಗಿತು. " ಒಳ್ಳೇದು, " ಎಂದು ಇಷ್ಟೇ ಮಾತ್ರ ನುಡಿದು, ತಟ್ಟನೆ ಅಲ್ಲಿಂದ ಜಾರಿಕೊಂಡು, ತನ್ನ ಕೋಣೆಯ ದಾರೀ ಹಿಡಿದನು.

. . . . . . .

ಸುಮಾರು ಇಪ್ಪತ್ತೈದು ವರುಷಗಳ ಹಿಂದಿನ ಸಂಗತಿ. ಬದಾಮಿಯ ಅರವತ್ತು ವರುಷದ ಒಬ್ಬ ಸಾಹುಕಾರರಲ್ಲಿ ಒಂದು ದಿವಸ ಮುತ್ತಿನ ದೊಡ್ಡ ವ್ಯಾಪಾರಸ್ಥರಾದ ಹೈದ್ರಾಬಾದದ ಹುಸೇನಖಾನರು ಬಂದಿದ್ದರು. ಸಾಹುಕಾರರ ಮೊದಲಿನ ಪೂರ್ವರು ಹೆಂಡಂದಿರು ದೊಡ್ಡ ದೊಡ್ಡ ಮನೆತನದಿಂದ ಬಂದು ಬಂದು, ಸಾಹುಕಾರರ ಐಶ್ವರ್ಯವನ್ನು

ಸ್ನೇಹದರ್ಶನ

೨೦ ನಾಲ್ಕೆಪ್ಪತ್ತು ಅನುಭವಿಸಲಿಕ್ಕೆ ದೈವಗಾಣದೆ ಈ ಮೊದಲು ತೀರಿ
ಗ ಹೋಗಿದ್ದರು. ಈಗಿದ್ದ ನಾಲ್ಕನೆಯ ಸಂಬಂಧವೆಂದರೆ ಹರಪನಹಳ್ಳಿಯ
ನ
ಶ್ರೀ ರಂಗಾಭಟ್ಟರ ಮಗಳು ಶಾರದಾಬಾಯಿ. ಮದುವೆಯಾಗಿ ಬಂದು ಹತ್ತು ವರುಷವಾಗಿ ಹೋಗಿತ್ತು. ಅವರಿಗೆ ಇಬ್ಬರು ಮಕ್ಕಳಿದ್ದಾರೆ– ಎಂಟು ವರುಷದ ವಿನಾಯಕ, ಎರಡು ವರುಷದ ವತ್ಸಲೆ. ಅಲ್ಲದೆ ಮನೆಯಲ್ಲಿ ಶಶಿಧರನೆಂಬ ಸಾಹುಕಾರರ ತಂಗಿಯ ಪರದೇಶಿ ಮಗನೊಬ್ಬನು. ಶಾರದಾಬಾಯಿಯ ಮಕ್ಕಳೊಂದಿಗೆ ಎಲ್ಲರ ಪ್ರೀತಿಗೂ ಪಾತ್ರನಾಗಿದ್ದನು. ಆತನ ವಯಸ್ಸು ಹತ್ತು. ಅಂತೂ ಸಾಹುಕಾರರು ಅಪಾರ ಸಂಪತ್ತು, ಚಿಕ್ಕ ಹೆಂಡತಿ, ಮನೆಯಲ್ಲಿ ಮುತ್ತಿನಂತಹ ಮೂವರು ಮುದ್ದುಮಕ್ಕಳು, ಇವರೆಲ್ಲರೊಂದಿಗೆ ಮುಪ್ಪಿನಕಾಲವಾಗಿದ್ದರೂ ಸುಖವಾಗಿದ್ದರು.

ಹವಿಾದಖಾನರು ವ್ಯಾಪಾರಕ್ಕೆಂದು ಬಂದಾಗ ಸಾಹುಕಾರರು ಲಾವಣೀ ವಸೂಲಿಗೆಂದು ಊರೂರು ಅಲೆದಾಡಲು ಹೋಗಿದ್ದರು. ಮನೆಯಲ್ಲಿ ಮಕ್ಕಳೊಂದಿಗೆ ಶಾರದಾಬಾಯಿಯೊಬ್ಬರೇ ಇದ್ದರು. ಖಾನರದೇನು ಶಾರದಾಬಾಯಿಯೊಡನೆ ಹೊಸತಾದ ಪರಿಚಯವಲ್ಲ. ವರುಷಕ್ಕೊಮ್ಮೆ ಸಾಹುಕಾರರಲ್ಲಿಗೆ ಬಂದು ಹತ್ತು–ಹನ್ನೆರಡು ದಿವಸ ವಸತೀ ಹೊಡೆದು, ವಿಸಿಲ್ಲೆಂದರೂ ಎರಡುನೂರು–ಮೂರುನೂರು ರೂಪಾಯಿಗಳ ಟೊಪ್ಪಿಗೆಯನ್ನು ಹಾಕಿಯೇ ಹೋಗುತ್ತಿದ್ದರು. ಖಾನರು ಬಂದು ಎಂಟು ದಿನ ಸಾಹುಕಾರರ ದಾರೀ ನೋಡಿದರು. ಇನ್ನೂ ಎಂಟು ಹತ್ತು ದಿನವಾದರೂ ದಾರೀ ನೋಡಿರೆಂದು ಶಾರದಾಬಾಯಿಯವರ ಆಗ್ರಹ. ಹವಿಾದಖಾನರದೇನು ಗಂಟುಹೋಗುತ್ತಿತ್ತು? ಹೊತ್ತುಹೊತ್ತಿಗೆ ಸುಗ್ರಾಸ ಭೋಜನ, ಫಲಾಹಾರ, ತಾಂಬೂಲ, ಕಾಫಿಗಳು ಸಿಗುತ್ತಿದ್ದವು.

ಅಂದು ಖಾನರು ಊರಿಗೆ ಬಂದು ಹದಿನೈದನೆಯ ದಿವಸ ಮಧ್ಯರಾತ್ರಿಯ ಎರಡುಗಂಟೆಯಾಗಿತ್ತು. ಎಲ್ಲೆಲ್ಲಿಯೂ ನಿಶ್ಶಬ್ದ! ಅಲ್ಲಲ್ಲಿ ಹಚ್ಚುತ್ತಿದ್ದ ಕಂದೀಲುಗಳನ್ನು ಮುನಿಸಿಪಾಲಿಟಿಯವರು ಅಂದು ಹಚ್ಚಿರಲಿಲ್ಲ; ಸಾಹುಕಾರರ ಮನೆಯ ಹಿತ್ತಿಲಬಾಗಿಲಲ್ಲಿ ಇಬ್ಬರು ನಿಂತಿದ್ದರು.

"ಶಾರದಾಬಾಯ್, ಆ ಹುಡಿಗ್ಗೇ ನೀವೇನ್ ಮಾಡ್ತೂ?.."

“ರಾತ್ರಿ ಎಂಟು ಗಂಟೆಗೆನೇ ಆದರ ವ್ಯವಸ್ಥಾ ಆತು. ನಮ್ಮೂರ ಗಂಗವ್ವನಲ್ಲಿ ಬಂದಿಳಿದಿದ್ದ ಆ ಗೋವೆ ವೇಶ್ಯಾಗ ಸಾಕಲಿಕ್ಕೆ ಕೊಟ್ಟುಬಿಟ್ಟೆ....” ಎಂದು ಅವಳು ಕಣ್ಣೊರಿಸಿದಳು.

“ಯಾ ಅಲ್ಲಾ! ಯೇ ತುಮು ಕ್ಯಾ ಕರದಿಯೇ? ಅದೂ ಇರ್ಲೀ ....ನಮ್‌ದೂ ಸಂಗಾಟ ಬಂದ್ರೇ, ನಿಂಗೇ ಓಡಿ ಒರಾಕ ಬರೂದುಲ್ ..ನಮ್‌ದೂ ನಿಮ್‌ದೂ ನಿಕೇಖಾನೀ ಆಗಾಕ ಬೇಕ್....ನೀಸಿದಕೇ ತಯಾರಾದಾವ್?”

“ತಯಾರಾಗ್ತೇನಿ..ಮತ್ತೇನ ಮಾಡಲಿ..?”

“ಅಚ್ಛಾ! ಚಲೋ, ಶಾರೂಬೀ....”

ಶಾರದಾಬಾಯಿಗೆ ಮೊದಲು ಸಾರೆ ಬೀಬೀಯೆನ್ನಿಸಿಕೊಳ್ಳಲಿಕ್ಕೆ ಹೇಗೆಹೇಗೋ ಆಯಿತು. ಕತ್ತಲೆಯಲ್ಲಿ ಒಳಹೊಕ್ಕು ಗಾಢನಿದ್ರೆಯ ಲ್ಲಿದ್ದ ಶಶಿಧರ–ವಿನಾಯಕರ ಮುಂದೆ ನಿಂತು, “ಹೊಸ ಹುರುಪಿಲೆ ಚಿಕ್ಕಗಂಡನ ಸಂಗತಿ, ಹೊಸಾ ಸಂಸಾರಾ ಹೂಡಿ ಉಲ್ಲಾಸದಿಂದ ದಿನಾ ಹಾಕಬೇಕು ಅಂಬೋ ನಮ್ಮಂಥಾ ಹುಡಿಗೇರ್ನ ಒಯ್ದು ಮುಂದಿ ಹದ್ದುಗಳ ಕೊರಳೊಳಗ ಕಟ್ಟಲಿಕ್ಕೆ ಮುಕ್ತಮಾರ್ಗ ಮಾಡಿಕೊಟ್ಟ ಕುರುಡ ಬ್ರಾಹ್ಮಣಸಮಾಜಾ, ನಿನಗ ಧಿಕ್ಕಾರ ಇರಲಿ!! ದೇವರ್‍ರ, ನಮ್ಮಪ್ಪಾ, ಇದೆಲ್ಲಾ ನಿನಗ ಗೊತ್ತಿರಲಿ, ಭಗವಂತಾ! ನನ್ನ ಪಚ್ಚಾ, ನನ್ನ ವಿನೂ ನನ್ನ ಶಶೀ....” ಎಂದು ಸದ್ದಿಲ್ಲದೆ ಹಂಬಲಿಸುತ್ತ ಎದ್ದು ಹೊರಟು ಬಿಟ್ಟಳು, ಶಾರೂಬೀಬೀ ಆಗಲಿಕ್ಕೆ!! ಸ್ಮಶಾನದ ಆಚೆ ದಾರಿಯಿಂದ ಖಾನರೊಡನೆ ಚಕ್ಕಡಿಯಲ್ಲಿ ಪ್ರವಾಸಮಾಡುತ್ತ ರೇಲ್ವೆ ನಿಲ್ದಾಣದ ದಾರಿಯನ್ನು ಹಿಡಿದಳು.

ಅದೇ ದಿವಸ ನಸುಕಿನ ನಾಲ್ಕರ ಸುಮಾರಿಗೆ ಸಾಹುಕಾರರು ಬಂದು ಬಾಗಿಲು ಬಡಿದರು. ವಿನಾಯಕನು ಎಚ್ಚರಾಗಿ ಕಣ್ಣೊರಸಿ ಕೊಳ್ಳುತ್ತ ಎದ್ದುಬಂದು ಬಾಗಿಲು ತೆರೆದು, “ಎಷ್ಟು ದಿವಸಾ ಹೋದೆಪಾ ಅಪ್ಪಾ, ಈ ಸಾರೆ ಊರಿಗೆ?” ಎಂದು ಕೇಳಿದನು. ಸಾಹು ಕಾರರು ಮರು ಮಾತಾಡದೆ ಮೊದಲು ಹಮ್ಮಣಿಯನ್ನು ತಿಜೋರಿ ಯಲ್ಲಿ ಇಟ್ಟು ಒರಬೇಕೆಂದು ಕೋಣೆಗೆ ಹೋದರು; ದೀಪ ಹಚ್ಚಿದರು.

ಮಂಚದ ಮೇಲೆ ಶಾರದಾಬಾಯಿಯಿರಲಿಲ್ಲ. "ಇಷ್ಟು ನಸುಕಿನಲ್ಲಿ ಎಂದೆಂದಿಗೂ ಏಳೂವಾಕೆಲ್ಲಾ ಇಂದು ಎದ್ದಾಳಲ್ಲಾ" ಎನ್ನುತ್ತ ತಿಜೋರಿಗೆ ಕೀಲಿ ಹಾಕುತ್ತಿದ್ದರು. ಅಷ್ಟರಲ್ಲಿ ನೆರೆಮನೆಯ ಮುದುಕಿ ಗಂಗಮ್ಮ ಕೈಯಲ್ಲಿ ಕಂದೀಲು ಹಿಡಿದುಕೊಂಡು, ಕೋಲೂರುತ್ತ ಬಂದು, "ಧಣ್ಯಾರ...." ಎಂದಳು. ಎರಡು ವರುಷದ ವತ್ಸಲೆ ಯನ್ನು ಮೇಶ್ಕೆಗೆ ಮಾರಿ, ಖಾನರ ಬೆನ್ನುಹತ್ತಿ ಓಡಿ ಹೋದ ಶಾರದಾ ಬಾಯಿಯ ಸುದ್ದಿಯೆಲ್ಲವನ್ನೂ, ಅಳುತ್ತ ಕರೆಯುತ್ತ ಅವರಿಗೆ ತಿಳಿಸಿ ದಳು.

ಸಾಹುಕಾರರ ಎದೆಯೊಡೆಯಿತು. ಕ್ಷಣಹೊತ್ತು ಕುಳಿತಲ್ಲಿಯೇ ತಣ್ಣಗಾದರು. ಇಷ್ಟೆಲ್ಲ ಕಾರಸ್ಥಾನವು ನಿರಾತಂಕವಾಗಿ ಸಾಗಲಿಕ್ಕೆ ಗಂಗಮ್ಮನ ಮಧ್ಯಸ್ಥಿಕೆಯಾಗಿರಲಿಕ್ಕೆ ಸಾಕೆಂದು ಅವರಿಗೆ ಅನಿಸದೆ ಹೋಗಲಿಲ್ಲ; ಏಕಂದರೆ ಗಂಗಮ್ಮ ಎಂತಹ ಕುಟಿಲತಂತ್ರದವಳೆಂಬುದು ಆ ಇಡೀ ಊರ ರಹವಾಸಿಗಳಿಗೆಲ್ಲ ಗೊತ್ತು. ಅಲ್ಲದೇ ತನ್ನ ವಸ್ತುವೇ ಕೆಡಕುಹಾದಿಗೆ ಹತ್ತಿದಾಗ ಯಾರಮೇಲೆ ಆರೋಪಕೊಟ್ಟರೆ ಏನು ಪ್ರಯೋಜನ ಎಂದೊಮ್ಮೆ ಅನ್ನಿಸಿತು. ಆದೇ ಕ್ಷಣವೇ ವಿಷ ತಿಂದು ಜನ್ಮ ನೀಗಬೇಕೆಂದು ಸಾಹುಕಾರರಿಗೊಮ್ಮೆ ಅನ್ನಿಸಿತು. ಆದರೆ, "ಆ ಹುಚ್ಚು....ಮಗಳು ವತ್ಸಲಾನ್ನ ಸೂಳೀಗೇರಿ ಪಾಲು ಮಾಡಿ ತನ್ನ ಪಾಪಕರ್ಮಾ ಕರದಲ್ಲೇ ಹೋದ್ಳು, ಇನ್ನ ನಾನು ಇಲ್ಲದ್ಹಾಂಗ ಆದ್ರ ಈ ಗಂಡಹುಡುಗ್ರ ಗತಿಯೇನು? ಇದ್ದಬಿದ್ದ ಆಸ್ತೀಪಾಸ್ತೀ ನೆಲ್ಲಾ ಸಿಕ್ಕಸಿಕ್ಕವರು ಒಂದು ನಾಯಿ–ನರೀಹಾಂಗ ಹಂಚಿಗೊಂಡು ಬಿಟ್ರಂದ್ರ, ನಾನಾಗಿ ಹುಡುಗರ್ನ ಭಾವೀ ನುಗಿಸಿದ್ಹಾಂಗಾಗತದ; ಬ್ಯಾಡಾ, ಇಂದಿಲ್ಲಾ ನಾಳೆ ನಾನು ಸಾಯೂವನ ಅಲ್ಲ? ಅಂದಮ್ಯಾಲೆ, ಜೀವಿರೋತನಕಾ ಅವರ್ನಷ್ಟು ವಿದ್ಯಾ–ಬುದ್ಧೀ ಕಲಿಸಿ ಮುಂದಕ ತರೋಣಾ.." ಎಂದುಕೊಂಡು, ಇಬ್ಬರೂ ಹುಡುಗರ ಹೆಸರಿನಲ್ಲಿ ಕಾಗದಪತ್ರಗಳನ್ನು ಮಾಡಿ, ಅವುಗಳಿಗೆ ತಮ್ಮ ಕೈಯಿಂದಲೇ ಮುದ್ರೆ ಯನ್ನಿಕ್ಕಿದರು.

ಊರಲ್ಲೆಲ್ಲಿನೋಡಿದಲ್ಲಿ ಸಾಹುಕಾರರ ಪತ್ನಿಯು ಎರಡು ವರುಷದ ವತ್ಸಲೆಯನ್ನು ಮಾರಿಕೊಂಡು, ಓಡಿಹೋದ ಸುದ್ದಿಯೇ ಸುದ್ದಿ!

ಸಾಹುಕಾರರು ವತ್ಸಲೆಯ ಶೋಧವನ್ನು ಬಹುಪರಿಯಾಗಿ ಮಾಡಿಸಿದರು; ಆದರೆ ಎಲ್ಲವೂ ಬೋರ್ಗಲ್ಲ ಮೇಲೆ ನೀರು ಹನಿಸಿದಂತಾಯಿತು. ಯಾವ ವೇಶ್ಯೆಯೋ, ಎಲ್ಲಿಗೆ ಹೋದಳೋ, ಹೇಗೆ ತಿಳಿಯಬೇಕು? ಮಗುವನ್ನು ಕಳೆದುಕೊಂಡ ನೋವು ಒಂದು ಬದಿಗೆ, ಪತ್ನಿಯ ಅವಿವೇಕತನದ ವರ್ತನದ ನೆನಪು ಇನ್ನೊತ್ತಟ್ಟಿಗೆ ಇಟ್ಟರೂ ಊರಲ್ಲಿ ನಡೆದ ಹರಟುವಿಕೆಯಿಂದ ಅವಮಾನವಾದಂತಾಗಿ ದಿನ ಹೋದಂತೆಲ್ಲ ಸಾಹುಕಾರರಿಗೆ ಹುಚ್ಚು ಹಿಡಿಯುವ ಹೊತ್ತು ಬಂದಿತು.

ಕೆಲದಿನಗಳ ಮೇಲೆ ಹುಡುಗರ ವಿದ್ಯಾಭ್ಯಾಸದ ನೆವಮಾಡಿ, ಸಾಹುಕಾರರು ಊರನ್ನೇ ಬಿಟ್ಟು, ಪುಣೆಯಲ್ಲಿರಹತ್ತಿದರು. ಊರಿಸಿಂದೂರಿಗೆ ಹೋದರೂ, ಶಾರದೆಯ ನೆನಪು ಸಾಹುಕಾರರ ಮನಸ್ಸಿಗೆ ಮೇಲಿಂದ ಮೇಲೆ ವ್ಯಥೆಯನ್ನುಂಟುಮಾಡುತ್ತಿತ್ತು. "ಹೇ ಮುಂಡೇ, ಹತ್ತು ವರ್ಷ ಮನೀ ಒಳಗ ಇದ್ದು ಪ್ರಪಂಚಾ ಮಾಡಿ, ಎರಡು ಮಕ್ಕಳೂ ಮರೀ ಕಂಡು, ಈಗ ನಿನಗ ಇಲ್ಲಿಲ್ಲದ್ದು ನೆನಪಾತ? ಹೊಟ್ಟೀ ಮಕ್ಕಳ್ನ ದಿಕ್ಕಿಗೊಂದೊಂದು ಬಿಟ್ಟು, ಜಾತಿಭ್ರಷ್ಟಳೂ, ಧರ್ಮಭ್ರಷ್ಟಳೂ ಆಗಲಿಕ್ಕೆ ನಿನ್ನ ಮನಸಾರೆ ಹ್ಯಾಂಗ ಹೇಸಲಿಲ್ಲಾ..?" ಎಂದವರೇ ದಪ್ಪನೆ ಹಣೆಗೆ ಕೈ ಅಪ್ಪಳಿಸಿಕೊಂಡು ಉಸಿರು ಹಾಕುವರು–ಸಣ್ಣ ಮಕ್ಕಳಂತೆ ಗಳಗಳನೆ ಅತ್ತುಬಿಡುವರು. ಆದರೆ ಮಕ್ಕಳು ಮುಂದೆ ಬಂದೊಡನೆ, ಮತ್ತೆ ಅವರೆದುರಿಗೆ ಎಲ್ಲವನ್ನು ಮರೆಮಾಚುವರು; ಮರೆತುಬಿಡುವರು.

ಶಶಿಧರನ ಒಲವು ಓದಿನಕಡೆಗಿರುವಷ್ಟು ವಿನಾಯಕನದಿರಲಿಲ್ಲ. ನಾಲ್ಕು ವರುಷಗಳಲ್ಲಿ ಶಶಿಧರನು ಬೀ. ಏ. ಆದನು. ಆದರೆ ವಿನಾಯಕ ಇನ್ನೂ ಮ್ಯಾಟ್ರಿಕ್ಕಿನಲ್ಲಿಯೇ! "ಅವನಿಗೇನಾದರೂ ಸ್ವಲ್ಪ ತಿಳಿಹೇಳಬೇಕು, ಚನ್ನಾಗಿ ಅಭ್ಯಾಸಮಾಡೆಂದು" ಎಂದು ವಿಚಾರಿಸಿ, ಮತ್ತೇನಾದರೂ ಸಂಕಟವು ಬಂದೀತೆಂದು ಸುಮ್ಮನಾಗಿಬಿಟ್ಟರು ಸಾಹುಕಾರರು. ಆದರೂ ಬರುವದಿದ್ದರೆ ಸಂಕಟವು ಬಿಡುವದೆ?

ಒಂದು ದಿವಸ ಸಾಯಂಕಾಲ; ಸಾಹುಕಾರರು ಶಶಿಧರನಿಂದ ಕಾಲು ಒತ್ತಿಸಿಕೊಳ್ಳುತ್ತ ಆರಾಮುಕುರ್ಚಿಯಲ್ಲಿ ಕುಳಿತಿದ್ದರು; ವಿನಾಯಕನು ತಿರುಗಾಡಲಿಕ್ಕೆ ಹೋದವನು ಇನ್ನೂ ಬಂದಿರಲಿಲ್ಲ.

೮೦ ಗ ಪ ಲ್ಲಿ

ಸಾಹುಕಾರರು ಕಣ್ಣೀರಳಿಸಿ, ಶಶಿಧರನನ್ನು ನೋಡಿಯೇ ನೋಡಿದರು; ಅವನ ತಲೆಯಮೇಲೆ ಬಲದ ಕೈಯನ್ನಾಡಿಸಿ, “ಪರದೇಶಿ ಮಗಾ, ಹೇಳಿದ್ಹಾಂಗ ಕೇಳಿದೆಂತ ಮುಂದ ಬಂದೆಪ್ಪಾ, ಇನ್ನ ನಿನ್ನ ತಲೀಮ್ಯಾಲೆ ನಾಲ್ಕು ಅಕ್ಕೀಕಾಳಷ್ಟು ಬಿದ್ರ ಆತು ನನ್ನ ಕೆಲಸಾ..” ಎನ್ನುತ್ತ ಆನಂದಬಾಷ್ಪಗಳನ್ನುದುರಿಸಿದರು. ಆ ಹೊತ್ತಿಗೆ ಯಾರೋ ಬಾಗಿಲು ತಟ್ಟಿದರು. ಶಶಿಧರನೆದ್ದು, ತೆರೆದು ನೋಡಬಂದರೆ, ಯಾವನೋ ಒಬ್ಬನು ಒಂದು ಚೀಟಿಯನ್ನು ಅವನ ಕೈಗೆ ಕೊಟ್ಟು, ಉತ್ತರದ ಅಪೇಕ್ಷೆಯಿಲ್ಲದೆ ಭರ್ರನೇ ಸಾಯಕಲ್ಲ ಮೇಲೆ ಓಡಿಬಿಟ್ಟನು. ಓದಿಕೊಂಡ ಬಳಿಕ ಶಶಿಧರನು ಮುಖ ಸಣ್ಣಗೆ ಮಾಡಿದನು. ಸಾಹುಕಾರರು ಅದರಲ್ಲಿದ್ದುದನ್ನೋದಿ ಹೇಳೆಂದು ಆಗ್ರಹ ಮಾಡಿದಾಗ, ನಿರ್ವಾಹವಿಲ್ಲದೆ ಓದಬೇಕಾಯಿತು: ಪತ್ರವು ವಿನಾಯಕನದು. “ಅಪ್ಪಾ, ಮತ್ತು ಹಿರಿಯಣ್ಣನ ಸಮಾನನಾದ ಶಶಿಧರಾ, ನನಗೆ ಈ ಹಾಳು ಪ್ರಪಂಚದಲ್ಲಿರುವದು ಬೇಡವಾಗಿದೆ. ಅಪ್ಪಾ, ಪ್ರಪಂಚದಲ್ಲಿದ್ದುಕೊಂಡು ನೀನೇನೇನು ಕಂಡೆ? ಸ್ವಲ್ಪ ವಿಚಾರಿಸು. ಶಶಿಧರಾ, ಮಾತಾಪಿತರನ್ನು ಚಿಕ್ಕಂದಿನಲ್ಲಿಯೇ ಕಳೆದುಕೊಂಡೆ. ಮಾತೆಯ ಸಮಾನಳಾಗಿದ್ದ ನಿನ್ನ ಸೋದರತ್ತೆಯ ಕಥಾಂತರವನ್ನು ಸ್ವಲ್ಪ ನೆನಪುಮಾಡಿಕೋ! ನನ್ನನ್ನು ಮನೆಗೆ ಬಾರೆಂದು ಎಂದಿಗೂ ಕರೆಯಬೇಡಿರಿ. ನಾನೆಲ್ಲಿಯೂ ಹೋಗುವದಿಲ್ಲ—ಪ್ರಾಣಕೊಡುವದಿಲ್ಲ—ಇಲ್ಲವೆ ಆ ಪಾಪಿಷ್ಠಳಂತೆ ಕುಲಾಧಮನೂ ಆಗುವದಿಲ್ಲ. ಈ ಹೇಸಿ ಜೀವನದ ಬೇಸರಿಕೆ ಬಂದಿದೆ. ನಾಶಿಕದ ಶಂಕರಬುವಾನವರ ಶಿಷ್ಯತ್ವವನ್ನು ಕೈಕೊಳ್ಳಲಿಕ್ಕೆ ಹೊರಟಿದ್ದೇನೆ. ಆಗಾಗ ನಿಮ್ಮಿರ್ವರಿಗೆ ಬೆಟ್ಟಿಯಾಗುತ್ತಲಿರುವೆನೆಂಬ ಭರವಸೆ ಕೊಡುವೆನು. ನೀವಿಬ್ಬರೂ ಯಾವ ಬಗೆಯಿಂದಲೂ ಮನಸಿಗೆ ಹಚ್ಚಿಕೊಳ್ಳಬಾರದು—ಅಣ್ಣಾ, ನೀನು ಅಪ್ಪನನ್ನು ಚೆನ್ನಾಗಿ ಕಾಪಾಡು..”

ಇದನ್ನು ಕೇಳಿ ಸಾಹುಕಾರರು ದೊಪ್ಪನೆ ನೆಲಕ್ಕೆ ಬಿದ್ದರು. ಶಶಿಧರನು ಕೂಡಲೆ ಅವರ ತಲೆಯನ್ನು ತೊಡೆಯ ಮೇಲಿರಿಸಿಕೊಂಡು ನೆತ್ತಿಗೆ ನೀರು ಬಡಿದು ಗಾಳೀ ಹಾಕಿದನು. ಸಾಹುಕಾರರು ಚೇತನಗೊಂಡು: “ಹುಶ್, ದೇವರs, ಇನ್ನೂ ಏನೇನ ನೋಡೋದದನೋ

೧೫೪

ನನ್ನ ದೈವದೊಳಗ, ಎಪ್ಪತ್ತು ವರ್ಷಾಗಲಿಕ್ಕೆ ಬಂದವ್ಹೂ, ಲಗೂನ ಕಣ್ಮುಚ್ಚಪ್ಪಾ ಇನ್ನ...."

ವಿನಾಯಕನು ಮನೆಬಿಟ್ಟ ಆರು ತಿಂಗಳಲ್ಲಿ ವಜ್ರ–ದೇಹಿಗಳಂತಿದ್ದ ಸಾಹುಕಾರರು ನವೆದು ಹಲ್ಲಿಯ ಮರಿಯಾದರು! ಈ ಅವಧಿಯಲ್ಲಿ ಶಶಿಧರನ ಬೀ. ಎ. ಆಗಿ, ಓದು ಅಲ್ಲಿಗೇ ನಿಂತಿದ್ದಿತು. ಶಶಿಧರನ ಆಗ್ರಹಕ್ಕಾಗಿ ನಡುವೆ ಒಮ್ಮೆ ವಿನಾಯಕನು ಬಂದು ನಾಲ್ಕು ತಾಸುಗಳವರೆಗೆ ಮನೆಯಲ್ಲಿದ್ದು ತಂದೆಯನ್ನು ಸಂತೈಸಿ ಹೋಗಿದ್ದನು. ಮುಂದೆ ಆರು ತಿಂಗಳು ದಾಟುವಷ್ಟರಲ್ಲಿ ಸಾಹುಕಾರರು ಹಾಸಿಗೆಯನ್ನೇ ಹಿಡಿದರು. ಒಂದು ಮಧ್ಯರಾತ್ರಿ ಶಶಿಧರನನ್ನು ಎಬ್ಬಿಸಿ ನಾಲ್ಕು ಹಿತದ ಮಾತುಗಳನ್ನು ಹೇಳಿ, ಕಡೆಯವರೆಗೂ ಅವನೊಬ್ಬನು ತಮ್ಮನ್ನು ಅರಗಳಿಗೆ ಅಗಲದಿದ್ದುದಕ್ಕೆ ಅವನಿಗೆ ಬಾಯ್ತುಂಬ ಹರಸಿದರು. "ಶಶಿಧರಾ, ಬೆಳಗ ಹರಿಯುವದರೊಳಗ ವಿನ್ಯಾನ್ನ ತರಬೇಕ ನೋಡಪ್ಪಾ; ಬೆಳಗಾದ ಕೂಡಲೆ, ಎಲ್ಲಾ ಆಸ್ತೀ ನಿನ್ನ ಹೆಸರ್ಲೆಮಾಡಿ ಹೊಸಾ ಕಾಗದಪತ್ರಾ ಮಾಡಿಬಿಡತೇನಿ; ಏನೋ ಅಪ್ಪೀತಪ್ಪಿ ಅಂವಾ ಬೇಡಿದ್ರ–ಅದೂ ಸತ್ಕಾರ್ಯಕ್ಕನಂತಂದ್ರ ಮಾತ್ರ, ಯಾವಾಗ್ಯಾವಾಗರ ಕೊಡತಿರೂ....'
ಗಂಟಲು ಬಿಗಿದುಬಂದು, ಸುಮ್ಮನೆ ಬಿದ್ದರು.

ನಸುಕಿನಲ್ಲಿ ಶಶಿಧರನು ನಾಶಿಕಕ್ಕೆ ತಂತಿಕೊಟ್ಟು ವಿನಾಯಕನನ್ನು ಕರೆಸಿಕೊಂಡನು. ಸಾಯಂಕಾಲಕ್ಕೆ ಸಾಹುಕಾರರು ಇಬ್ಬರು ಮಕ್ಕಳೊಡನೆ ಮನದಣಿಯೆ ಮಾತನಾಡುತ್ತಲೆ 'ರಾಮ ರಾಮ'ವೆನ್ನುತ್ತ ಪ್ರಾಣ ಬಿಟ್ಟರು.

ವರ್ಷಾರುತಿಂಗಳಲ್ಲಿ ವಿನಾಯಕನ ಮನಸು ಅದೆಷ್ಟೋ ಗಟ್ಟಿಯಾಗಿತ್ತು; ಶಶಿಧರನಿಗೆ ಮಾತ್ರ ಸಾಹುಕಾರರ ಮರಣದಿಂದ ಅಪಾರ ದುಃಖವಾಯಿತು. ತನ್ನ ನೆತ್ತಿಯ ಮೇಲಿನ ಸೂರ್ಯಪ್ರಕಾಶವು ಅಂದಿಗೆ ಮುಳುಗಿತೆಂಬಂತೆ ಭಾಸವಾಯಿತು. ಇಬ್ಬರೂ ಕೂಡಿ, ಯೋಗ್ಯರೀತಿಯಲ್ಲಿ ಹಿರಿಯರ ಅಂತ್ಯವಿಧಿಯನ್ನು ಜರುಗಿಸಿದರು. ಶಶಿಧರನಾದರೂ ಎಷ್ಟೆಂದರೂ ವಿಚಾರವಂತನು. ಇಬ್ಬರೂ ಆದಷ್ಟು ಬೇಗ ದುಃಖಶಮನ ಮಾಡಿಕೊಂಡರು. ಶಶಿಧರನು ಮುಂಬಯಿಯಲ್ಲಿ ಎಮ್. ಎ. ಕಲಿಯಲು

ನಿಲ್ಲುವ ವಿಷಯವಾಗಿ ಇಬ್ಬರೂ ಕೂಡಿ ವಿಚಾರಿಸಿದರು, ಅದರಂತೆ ಮೊದಲ ದಿನ ವಿನಾಯಕನು ಪ್ರಯಾಣ ಬೆಳೆಯಿಸಿದನು. ಶಶಿಧರನು ಮುಂದೆರಡು ದಿನಗಳವರೆಗೆ ತನ್ನ ಸಾಮಾನು-ಸಟ್ಟು-ಕಾಗದಪತ್ರ ಮತ್ತು ಹಣದ ವ್ಯವಸ್ಥೆಮಾಡಿಕೊಂಡು, ಪುಣೆಗೆ ಶರಣು ಹೊಡೆದು, ಮುಂಬಯಿಗೆ ಹೋದನು.

. . . . . . .

ಪ್ರೇಮೆಯ ಅಟ್ಟದ ಮೆಟ್ಟಿಲುಗಳಿಂದ ಬೇಗ ಬೇಗ ಜಾರಿಕೊಂಡು ತನ್ನ ಕೋಣೆಯ ದಾರೀ ಹಿಡಿದು ನಡೆದಾಗ, ಇದೆಲ್ಲ ಹಿಂದಿನ ಕಥೆಯು ನಾಲ್ಕಾರು ನಿಮಿಷಗಳಲ್ಲಿ ಮಿಂಚಿನಂತೆ ಶಶಿಧರನ ತಲೆಯಲ್ಲಿ ಹೊಳೆದು ಹೋಯಿತು. ಅವನ ಚಿತ್ತವು ಸಾವಿರಾರು ವಿಚಾರಗಳಿಂದ ಚದರಿ ಚಲ್ಲಾಪಿಲ್ಲಿಯಾಯಿತು.

"ನಮ್ಮ ಸಿಯೊಳಗೆಂತೆಂಥಾ ಅನಾಹುತಾ ಆಗಿಹೋಗ್ಯಾವ....? ಹೀಂಗಿದ್ದು ಪ್ರೇಮಾನ ಮನೀ ಒಳಗ ಒಂದರ್ಧಾ ಘಳಿಗಿ ಕೂಡ್ರಲಿಕ್ಕೆ ನನಗ ಭಯಾ ಯಾಕಾತೂ..? ಹೇಯಾ ಯಾಕಾತೂ..? ಇಲ್ಲಾ.. ಇಲ್ಲಾ.. ಖೋಲಿಗೆ ಹೋಗಿ ಆಕಿಗೆ ಕ್ಷಮಾ ಬೇಡಿ ಒಂದು ಪತ್ರಾ ಬರೀತೇನಿ. ಆಕೀ ಸಂಕಟ ಅದನರ ಏನು ತಿಳಸಂತೇನಿ; ಆಕೀಗೆ ಬೇಕಾದಾಗ ನೆರವಾಗಲಿಕ್ಕೆ ಟೊಂಕಾ ಕಟ್ಟತೇನಿ; ಜನರ ಬೆದರಿಕಿಗೆ ಇನ್ನೆಂದಿಗೂ ಸೊಪ್ಪು ಹಾಕಲಾರೆ; ಸಹಾಯಾ ಕೇಳೋದರೊಳಗ ಆಕೀದರ ತಪ್ಪೇನು..? ಆಕಿ ಕೇಳದs ಮಾಡದs ಈಗೊಮ್ಮೆ ಕಾಲೇಜದ ತುಂಟರ ಬೈಗಳದಿಂದ ಆಕಿನ್ನ ಪಾರುಮಾಡೇನಿ; ಪರ್ಸು-ಡಾಯರೀ ಟ್ರಾಮಿನೊಳಗ ಮರತುಹೋದಾಗ, ಮನಿ ಮುಟ್ಟ ಹೋಗಿ ಆಕೀಗೆ ಮುಟ್ಟಿಸಿಬಂದೇನಿ.. ಮತ್ತ ಇವೊತ್ತ ಮಳಿ-ಗುಡುಗಿನೊಳಗಿಂದ ಆಡಿವೀಹಾದೀಲೆ ಕಾಯ್ಕೊಂಡು ಬಂದೇನಿ; ಈ ದೊಡ್ಡಸ್ತಿಕೀ ಮಾಡಿದೇ ಅಂತ, ನನಗ ಆಕಿ ಗುಬ್ಬೀಹಾಂಗ ಬಾಯಿಬಿಟಗೋತ ಕೇಳಿದ್ಲೊ.. ಹುಡುಗೇನೋ ಸರಳ ಬಾಲಿ ಇರಬೇಕು.. ಏನs ಇರ್ಲಿ.. ಇನ್ನ ಆಕೀ ಸಂಗತಿ ಹ್ಯಾಂಗ ಬೇಕು ಹಾಂಗ ಇರೋದು. ನಮ್ಮೂರೊಳಗ ಕಾಲಿಡ ದಷ್ಟು ನಮ್ಮ ಮನೆತನಕ್ಕ ಈಗಾಗಳೆ ಎಂದೋ ಮಶೀ ಬಳದು

ಹೋಗೇದ.. ಅಂದಮ್ಯಾಲೆ ಆಕೀ ಸಂಗತೀ ತಿರಗ್ಯಾಡಿದ್ರ ಹೊಸದಾಗಿ ಹತ್ತಬೇಕಾದ ಕಲಂಕ ಎಲ್ಲೀದು....? ಇಷ್ಟ ಅಂಜಬುರುಕಾ ನಾನು ನಾಳೆ ದೊಡ್ಡ ಸಮಾಜಸುಧಾರಕಾಗಬೇಕಂತೇನಲ್ಲ..?''

ಕೊಣೆಯ ಕೀಲಿಯನ್ನು ತೆಗೆದು, ಊಟಕ್ಕೆ ಕುಳಿತನು. ಖಾನಾವಳಿಯವನು ''ರಾಯರೆ, ಮೈಯಲ್ಲಿ ಸೊಗಸಿಲ್ಲವೇ? ..'' ಎಂದು ಕೇಳಿದಾಗ ಸಾರು ಬೇಕಾದಾಗ ಹಾಲು, ಮೊಸರು ಬೇಕಾದಾಗ ತುಪ್ಪವನ್ನು ತಾನು ಬೇಡುತ್ತಿರುವೆನೆಂಬ ಮಾತು ಅವನ ಜ್ಞಾಪಕಕ್ಕೆ ಬಂದಿತು. ''ಹೂಂಸಪಾ, ಅಡ್ಡ ಮಳೀಗೆ ಸಿಕ್ಕಿದ್ದೀ ..'' ಎನ್ನುತ್ತ ಗಪಗಪನೆ ತಿಂದೆದ್ದು ಬಂದು, ಬಾಗಿಲಿಕ್ಕಿಕೊಂಡು ಸೆಂಟೆಡ್ ಪೇಪರಮೇಲೇನನ್ನೋ ಬರೆದು, ತಲೆದಿಂಬಿಗಿಟ್ಟುಕೊಂಡು ಮಲಗಿದಾಗಲೇ ಆತನಿಗೆ ಗಾಢವಾಗಿ ನಿದ್ರೆಹತ್ತಿತು.

ಮೂರನೆಯ ದಿನದ ಸುದ್ದಿ. ಪ್ರೇಮಾ ಕಾಲೇಜಿನಿಂದ ಬಂದು ಬೇಜಾರ ಮನಸಿನಿಂದ ಮಲಗಿದ್ದಳು. ಗಾಢ ನಿದ್ರೆ ಹತ್ತಿದ್ದಿತು.

''ಬಾಯಿಸಾಹೇಬ!..''

ಪ್ರೇಮಾ ಎಚ್ಚತ್ತಳು. ಶಾಂತೆಯು ಕೈಯೊಳಗಿನ ಚಹವನ್ನೂ, ಪತ್ರವನ್ನೂ ಇಸಿದುಕೊಂಡಳು; ಸ್ವಲ್ಪ ಗಾಬರಿಯೂ ಆದಳು. ಕಾಲೇಜ ಹುಡುಗರ ತುಂಟತನವು ಬೇರೆ ಇರಲಿಕ್ಕಿಲ್ಲವಷ್ಟೆ?–ಎಂಬ ಸಂಶಯವುಂಟಾಯಿತು. ಮೊದಲು ಚಹವನ್ನು ಕುಡಿಯುವಂತೆ ಶಾಂತೆ ಸೂಚಿಸಿದಳು. ಶಾಂತೆಯು ಅವಳ ಗುಟ್ಟಿನ–ಅಂತಃಕರಣಕ್ಕೆ ತಕ್ಕಂತೆ ನಡೆಯುವ ದಾಸಿ. ಇಬ್ಬರೂ ಸಮವಯಸ್ಕರು. ಚಹ ಕುಡಿದು ಪತ್ರವನ್ನೊಡೆದು ಓದಿದಳು.

''ಪ್ರೇಮಾ, ಮನಸಿನಲ್ಲಿ ಬಂದುದನ್ನು ಸ್ಪಷ್ಟವಾಗಿ ವ್ಯಕ್ತಪಡಿಸಲು ಬರೆಯುತ್ತಿದ್ದೇನೆ. ನಿನ್ನ ಮನೆ ಬಿಡುವಾಗ 'ಅನಾಥ ಭಗಿನಿಯನ್ನು ರಕ್ಷಿಸಬೇಕೆ'ಂದು ದೀನವದನೆಯಾಗಿ ಹರಿಣಿಯ ಹಾಗೆ ಕಣ್ಣಲ್ಲಿ ನೀರು ತುಳುಕಿಸುತ್ತ ನೀನು ಅಂಗಲಾಚಿದುದು, ನನ್ನ ಜೀವಜೀವಾಳವನ್ನೇ ಕುಟುಕುತ್ತಿದೆ! ನನ್ನ ವಿಚಾರಶಕ್ತಿಯನ್ನು ಬಡಿದೆಬ್ಬಿಸಿದೆ. ಅನ್ಯಥಾ

ಭಾವಿಸಬೇಡ. ಬೇಕಾದಾಗ ನನ್ನನ್ನೊಬ್ಬ ಧರ್ಮಬಂಧುವೆಂದು ಬಗೆದು ನನ್ನ ನೆರವನ್ನು ಬೇಡಲಿಕ್ಕೆ ಹಿಂಜರಿಯಬೇಡ. ಈ ಪತ್ರ ಮುಟ್ಟಿದ ಕೂಡಲೆ ನನ್ನ ಕೋಣೆಯ ಕಡೆಗೆ ಬರುವಿಯಾದರೆ ನೋಡು, ಮುಕ್ತಮನಸಿನಿಂದ ಮಾತನಾಡಲು ಇಬ್ಬರಿಗೂ ಅನುವಾದೀತು. ನನ್ನ ನಿನ್ನ ಅಕಾರಣ ಸ್ನೇಹದ ಬೆಳತಿಗೆಯನ್ನು ಜಗತ್ತಿನಲ್ಲಿ ಬಹು ಅಪೂರ್ವವಾಗಿ ಬೆಳಗಿ ಸೋಣ. ಇತಿ, ನಿನ್ನ ಶಶಿಧರ.''

ಕಣ್ಣಾರಳಿ ಪ್ರಫುಲ್ಲಿತವಾದವು. ತೀರ ಸಾದಾ ಉಡುಪುನ್ನು ಧರಿಸಿ ಕೊಂಡು ಶಾಂತೆಯನ್ನು ಸಂಗಡ ಕರೆದುಕೊಂಡು ಹೊರಟುಬಿಟ್ಟಳು. ಕೋಣೆಗೆ ಬಂದಾಗ ಸಾಯಂಕಾಲದ ಆರು ಬಡಿದಿತ್ತು.

ಶಶಿಧರನ ಮುಂದೆ ಎಲ್ಲವನ್ನೂ ಮನಬಿಚ್ಚಿ ತೋಡಿಕೊಂಡಳು. ತನಗೆಷ್ಟು ಸುಖಸಾಮಗ್ರಿ–ಸ್ವಾತಂತ್ರ್ಯಗಳಿದ್ದರೂ, ಮನಸಿಗೆ ಸುಖ ವಿಲ್ಲದ ಸಂಗತಿಗಳನ್ನುಸುರಿದಳು. ತನ್ನ ಮನಸಿಗೆ ವಿರುದ್ಧವಾಗಿ ತಾಯಿ ಕಾಮಾಂಧ ಸಾಹುಕಾರರಿಗೆ ತನ್ನ ಗಾಯನ–ವಾದನ ಕೇಳಲು ಹೋಗಲಿಕ್ಕೆ ಹೇಗೆ ಮುಕ್ತ ಮಾರ್ಗಮಾಡಿಟ್ಟಿರುವಳೆಂತಲೂ, ಅವೆಲ್ಲ ತನ್ನ ಹೃದಯಕ್ಕೆ ನಡುವವೆಂತಲೂ, ಮುಂದೆ ತನ್ನನ್ನು ಅಂತಹ ಸಂಕಟ ದೊಳಗಿಂದ ಪಾರುಮಾಡುವವರಾರೆಂತಲೂ ಅತ್ತಳು; ಶಶಿಧರನೂ ತನ್ನ ಮನೆತನದ ಸಂಗತಿಯನ್ನು ಸ್ವಲ್ಪದರಲ್ಲಿ ಆಕೆಗೆ ಹೇಳಿ, ನಿಟ್ಟುಸಿರಿಟ್ಟನು. ಇಬ್ಬರೂ ಕೆಲಹೊತ್ತು ಸ್ತಬ್ಧರಾಗಿದ್ದರು. ಬಹಳ ವಿಚಾರಿಸಿದ ಮೇಲೆ ಶಶಿಧರನು, ''ಪ್ರೇಮಾ ನಿನ್ನ ಬೀ. ಏ. ನನ್ನ ಎಮ್. ಏ. ಆಗಲಿಕ್ಕೆ ಒಂದು ವರುಷದ ಅವಧೀ ಅದ. ಸದ್ಯಕ್ಕಂತೂ ನಿನ್ನಲ್ಲಿ ಬರಹೋಗುವ ಜನರ ಕಾಟ ತಪ್ಪೋದ ಅಂತೀದಿ. ಒಂದು ವೇಳೆ ಹಾಡುವ ಬಾರಿಸುವ ಪ್ರಸಂಗ ಬಂದರೂ ಬರಲಿ, ಬೀ. ಏ. ಆಗುವವರೆಗೆ ನಿನಗೇನೂ ಹೆದರಿಕಿಲ್ಲಲ್ಲಾ? ನಿನ್ನ ಮುಂದಿನ ಆಯುಷ್ಕ್ರಮಣದ ಬಗ್ಗೆ ನಿಧಾನವಾಗಿ ವಿಚಾರಿಸಲಿಕ್ಕೆ ಒಂದು ವರುಷದ ಅವಧಿ ಬೇಕಾದ್ಹಾಂಗ ಅದ; ನಿಮ್ಮ ತಾಯಿಯ ಕೂಡ ಯಾವ ಬಗೆಯ ಕೋಲಾಹಲವನ್ನೂ ಬೆಳಸಬೇಡಾ, ಶಾಂತಚಿತ್ತಳಾಗಿ ಅಭ್ಯಾಸಮಾಡು; ಮತ್ತ ವಿಚಾರಿಸೋಣ. .''

ಆ ತಿಂಗಳಲ್ಲಿ ಒಂದೆರಡು ಬಾರಿ ಶಶಿಧರನು ಪ್ರೇಮಾನ ಮನೆಗೆ ಹೋಗಿ ಅವಳ ತಾಯಿಗೆ ಪ್ರೇಮಾನ ಮದುವೆ ಮಾಡಲು ಉಪದೇಶಿಸುತ್ತಿದ್ದನು. "ನಮ್ಮಂಥಾವರ ಮಗಳ್ನ ಯಾರು ಲಗ್ನಾ ಮಾಡಿಕೋಬೇಕಪ್ಪಾ, ತಮ್ಮಾ ? . . . ." ಎಂದು ಉದಾಸಳಾಗುವ ಹಿರಿಯಳಿಗೆ, "ನಾ ನೋಡಿಕೊಡತೇನಿ ನಿಮ್ಮ ಮಗಳಿಗೆ ಫರ್ಸ್ಟ್‌ಕ್ಲಾಸ್ ಗ್ರ್ಯಾಜುಯೇಟ ವರಾ!" ಎಂದು ಧೈರ್ಯಕೊಡುತ್ತಿದ್ದನು. "ಅಷ್ಟ ಮಾಡೋ ನನ್ ಮಗನ, ನಿನಗ ಪುಣ್ಯಾ ಹತ್ತಲಿ, ನಮ್ಮ ತಾಯಿ ನನಗ ಲಗ್ನಾ ಮಾಡತೇನಿ ಮಾಡತೇನಿ ಅನಕೋತನ ಭಾಂವೀ ನುಗಿಸಿದ್ಲೊ.", ಎನ್ನುತ್ತ, ತಾನೊಬ್ಬ ಬ್ರಾಹ್ಮಣ ವಿಧವೆಯ ಕುವರಿಯೆಂತಲೂ, ವೇಶ್ಯೆ ಸಲುಹಿ ತನ್ನನ್ನು ವೇಶ್ಯಾವೃತ್ತಿಗೆ ಬಿಟ್ಟಳೆಂತಲೂ ಹೇಳಿ, ಕಣ್ಣೀರು ತಂದಳು. "ಹಾಂಗಾದ್ರ ಇಂದಿನಿಂದ ಯಾರಿಗೂ ಅಂಥಿಂಥಾವ್ರಿಗೆ ಮನೀ ಒಳಗ ಕಾಲು ಹಾಕಗೊಡೂಹಾಂಗಿಲ್ಲಾ !" ಎಂದು ಮಾತಿನ ಲಹರಿಯಲ್ಲಿ ಅವಳಿಂದ ಆಶ್ವಾಸನ ಪಡೆದು ಹೊರಬೀಳುತ್ತಿದ್ದನು.

ಅಂದಿನಿಂದ ಮೊದಲ್ಗೊಂಡು ಮನೆಗೆ ಬರುಹೋಗುವ ಮುದಿ ಗೂಬೆಗಳ ಕಾಟ ತಪ್ಪಿತು; ಇತ್ತ ಪ್ರೇಮಾ-ಶಶಿಧರರಲ್ಲಿಯೂ ಅನ್ಯೋನ್ಯವಾಗಿ ಸ್ನೇಹವು ಬೆಳೆಯಿತು. ಇದರಂತೆ ಸುಮಾರು ಒಂದು ವರ್ಷ ಕಳೆಯುವಷ್ಟರಲ್ಲಿ, ಶಶಿಧರನ ಪುಟ್ಟಿಗೆ ಮಾತ್ರ, ಪ್ರೇಮಾನ ಬಗ್ಗೆ ಇದ್ದ ಸ್ನೇಹವು ಪ್ರೇಮದಲ್ಲಿ ಪರಿಣಮಿಸಿತೆಂದು ಹೇಳಬಹುದು. ಅವಳ ಸೌಜನ್ಯ-ಶಾಲೀನತೆಗಳು ಅವನನ್ನು (ಹರಾತ್ರಾಗಿ) ಮೆಚ್ಚಿಸಿದ್ದವು; ಒಪ್ಪ ಹಾಕಿದ ಬಂಗಾರದಂತೆ ಅವಳು ಪರಿಶುದ್ಧಳೆಂದು ಅವನಿಗೆ ಮನದಟ್ಟಾಗಿತ್ತು; ಅವಳನ್ನು ಮದುವೆಯಾಗಿ ಬಿಡಬೇಕೆಂದು ಅವನಾಸೆ; ಪ್ರೇಮಾನ ಪರೀಕ್ಷೆ ಮುಗಿದು, ಪೇಪರುಗಳು ನೆಟ್ಟಗಾಗಿದ್ದವು; ಶಶಿಧರನ ಪರೀಕ್ಷೆಗೊಂದುವಾರ ಉಳಿದಿದ್ದಿತು; ಅವಳ ಪರೀಕ್ಷೆಗಾರಂಭವಾದಂದಿನಿಂದ ಇಬ್ಬರ ಬೆಟ್ಟಿಯೇ ಆಗಿರಲಿಲ್ಲ. ಅಂತೆಯೇ ತನ್ನ ಪರೀಕ್ಷೆಗಾರಂಭವಾಗುವದರೊಳಗಾಗಿ ಅವಳೊಡನೆ ಒಮ್ಮೆ ಮನದಣಿಯೆ ಮಾತನಾಡಿ, ತಮ್ಮಿಬ್ಬರ ಮದುವೆಯ ಮಾತನ್ನು ಇತ್ಯರ್ಥಗೊಳಿಸಬೇಕೆಂದು ಮಾಡಿದ್ದನು; ಹಾಗೆ ಮಾಡಿದರೇನೇ ಅವನ ಪೇಪರುಗಳು ಚೆನ್ನಾಗಿ ಬಿಡಿಸಿ

ಯಾಗುತ್ತಿದ್ದನಂತೆ ! ಅಂತೆಯೇ ಒಂದು ನಿಮಿಷವೆಂದರೆ ಒಂದು ಯುಗದಂತೆ ಅವನಿಗೆ ತೋರಹತ್ತಿತು. ಮನಸಿನ ಓಟದ ಮುಂದೆ ಕಾಲದ ಓಟ ನಡೆದೀತೇ ?

ಇತ್ತ ಪ್ರೇಮಾನ ಮನಸಿನಲ್ಲಿ ಶಶಿಧರನ ಬಗ್ಗೆ ಬೇಕಾದಷ್ಟು ಅಂತಃಕರಣವಿದ್ದರೂ, ಅದನ್ನವಳು ಪ್ರೇಮವೆಂದುಕೊಳ್ಳಲಿಲ್ಲ. ಅವಳ ಮನಸಿನ ಸ್ಥಿತಿಯೇ ಬೇರೆಯಾಗಿತ್ತು. ಒಮ್ಮೊಮ್ಮೆ ಹಾಗೆ ವಿಚಾರ ಬರುತ್ತಿದ್ದರೂ ಅದನ್ನು ಇದ್ದಕಿದ್ದಂತೆಯೇ ಹತ್ತಿಟ್ಟುಬಿಡುವಳು. ಏಕೆಂದರೆ, ಹಾಗೆಲ್ಲ ಪ್ರೇಮಗೀಮವೆಂದು ಶಶಿಧರನಿಗೆ ತೋರಗೊಟ್ಟರೆ, ಪ್ರಸಂಗ ಬಂದಾಗ ದಿಗ್ಗೆಂದು ಎದ್ದು ಸಹಾಯ ಮಾಡಲಿಕ್ಕೆ ಸಿದ್ಧನಾದ ಶಶಿಧರನ ಮನಸು ಎರಡಾಗಿ, ತಾನು ಮೊದಲಿನ ಸಂಕಟದಲ್ಲಿ ಮತ್ತೆಲ್ಲಿಯಾದರೂ ಬೀಳಬೇಕಾದೀತು; ತನ್ನ ಮುಂದಿನ ಆಸೆಯ ಹೂವು ಕಮರಿ ಕಳಚಿ ಬೀಳುವ ಹೊತ್ತು ಬಂದೀತು ಎಂದು ಹೆದರಿಕೆ ಅವಳಿಗೆ. ಅಂತೆಯೆ ಅವಳು ಯಾವಾಗಲೂ ಬಲು ಜೋಕೆಯಾಗಿ, ತನ್ನ ಹೃದಯವನ್ನು ಮುದುರಿಸಿಕೊಂಡೇ ಇರುವಳು. ಆದರೆ ಶಶಿಧರನ ಅಪ್ಪಣೆಯಿಲ್ಲದೆ ಒಂದು ಹೆಜ್ಜೆಯನ್ನು ಮುಂದಕ್ಕೆ ಹಾಕುವ ಹುಡುಗಿ ಅವಳಲ್ಲ ! ಪ್ರತಿಯೊಂದು ಮಾತಿನಲ್ಲಿಯೂ ಅವನ ಸಲಹೆಯನ್ನು ಪಡೆಯುತ್ತಿದ್ದಳು !!

ಇದೇ ವಿಚಾರದಲ್ಲಿ ತಲ್ಲೀನಳಾಗಿ ಪ್ರೇಮಾ ಅರನಿದ್ದೆಯಲ್ಲಿ ಬಿದ್ದಾಗ, ಶಾಂತೆಯು ಎಬ್ಬಿಸಿ ಒಂದು ಚೀಟಿಯೊಡನೆ ಚಹದ ಕಪ್ಪನ್ನು ತಂದುಕೊಟ್ಟಳು.

“ ಪ್ರೇಮಾ, ನಿನ್ನ ಪರೀಕ್ಷೆಗಾರಂಭವಾದಂದಿನಿಂದ ಇಬ್ಬರ ಬೆಟ್ಟಿಯೇ ಇಲ್ಲ; ಇನ್ನು ನನ್ನ ಪರೀಕ್ಷೆಯಾಗುವವರೆಗೂ ಇಬ್ಬರ ಬೆಟ್ಟಿ ಆಗಲಿಕ್ಕಿಲ್ಲವೇನೋ ! ಅದಕ್ಕಾಗಿ ಇಂದು ಸಾಯಂಕಾಲ ಮೊದಲನೇ ಆಟಕ್ಕೆ ಹೋಗೋಣ ಬಾ; ಸಿನೇಮಾ ನೋಡಿಕೊಂಡು ಹಾಗೆಯೇ ಬೆಳ್ದಿಂಗಳಲ್ಲಿ ಸ್ವಲ್ಪ ಅಡ್ಡಾಡಿಕೊಂಡು ಬರೋಣವಂತೆ; ಬಾಯಿಸಾಹೇಬ ! ತಮ್ಮ ವಾಹನದೊಂದಿಗೆ ಬರಬೇಕು. ”

ಪ್ರೇಮಾ ಡ್ರಾಯವ್ಹರನಾದ ವಿಶ್ರಾಮನಿಗೆ ಕಾರು ಸಿದ್ಧಪಡಿಸ ಹೇಳಿ, ಅವ್ವ—ಶಾಂತೆಯರಿಗೂ ಸಿನೇಮಾಕ್ಕೆ ಬರಲು ಕೇಳಿಕೊಂಡಳು;

ಪ್ರೇಮಾ ಉಡುಪು ಧರಿಸಿ ಬರುವಷ್ಟರಲ್ಲಿ ಕಲಾವತಿಬಾಯಿಯೂ ಶಾಂತೆಯೂ ಹೊರಟರು. ಮೂವರೂ ಗಾಡಿಯಲ್ಲಿ ಕುಳಿತ ಬಳಿಕ ಕಲಾವತಿಬಾಯಿಯು ಡ್ರೈವ್ಹರನ ಕಡೆಗೆ ಹೊರಳಿ ಸಹಜವಾಗಿ "ಏನೋ ವಿಶ್ರಾಮಾ, ಶಾಂತೀನೂ ಪರದೇಶಿ ಹುಡುಗಿ, ನೀನೂ ಪರದೇಶಿ ಹುಡುಗಾ—ಲಗ್ನಾ ಮಾಡಿಬಿಡ್ಲೇನು, ಇಬ್ಬರದೂ?..ನಮ್ಮನೀ ಒಳಗನss ಇದ್ದು ಬಿಟ್ಟೀರಂತ." ಇಬ್ಬರೂ ನಾಚಿಕೆಯಿಂದ ಒಬ್ಬರನ್ನೊಬ್ಬರು ನೋಡಹತ್ತಿದರು. ಪ್ರೇಮಾ ಮುಗುಳ್ನಗೆ ನಕ್ಕು "ಒಳ್ಳೇ ಐಡಿಯಾ!.."

. . . . . . .

ಕೋಣೆಯ ಹತ್ತಿರಕ್ಕೆ ಹಾರ್ನು ಕೇಳಬಂದ ಕೂಡಲೆ ಶಶಿಧರನೆದ್ದು ಹೊರಕ್ಕೆ ಬಂದು, "ಪ್ರೇಮಾ, ಚಹಾ ಕುಡಿದು ಹೋಗೋಣ.." ಎಂದನು. ಪ್ರೇಮಾ ಒಬ್ಬಳೇ ಕೆಳಗಿಳಿದಳು—ಮುದುಕಿ ಇಳಿಯಲಿಲ್ಲವೆಂದು ವಿಶ್ರಾಮು, ವಿಶ್ರಾಮುನಿಳಿಯಲಿಲ್ಲವೆಂದು ಶಾಂತೆ ಹೀಗೆ ಮೂವರೂ ಮೋಟಾರಿನಲ್ಲಿಯೇ ಉಳಿದರು; ಕೋಣೆಯೊಳಕ್ಕೆ ಬರಲಿಲ್ಲ.

'ಶಶೀ, ಎಲ್ಲಿದ ಚಹಾ?'

ಶಶಿಧರ ಸ್ಟೋವ್ಹ ಹೊತ್ತಿಸಹತ್ತಿದನು. ಪ್ರೇಮಾ ಕಪ್ಪು—ಬಸಿಗಳನ್ನು ಸರಿಪಡಿಸಬೇಕೆಂದು ಎಷ್ಟು ನೋಡುತ್ತಾಳೆ—ಶೆಲ್ಫಿನ ಮೇಲೆ ಅವಿರಲಿಲ್ಲ. ಯಾವಾಗ ಚಹ ಕುಡಿದು ಇಟ್ಟಿದ್ದನೋ, ೪—೬ ಜೋಡಿಗಳು ಒಣಗಿ ಒಜ್ಜಲುಕಟ್ಟೆಯ ಮೇಲೆ ಬಿದ್ದಿದ್ದವು. ಪ್ರೇಮಾ ಬೇಗಬೇಗ ಅವನ್ನು ತೊಳೆಯತೊಡಗಿದಳು.

"ಬ್ಯಾಡ, ಪ್ರೇಮಾ, ನೀ ಅಂಥಾ ಕೆಲ್ಸಾ ಮಾಡಬ್ಯಾಡಾ—ನೀ ರಾಜಸುಖದಾಗ ಬೆಳದಾಕಿ." "ಶಶಿಧರಾ! ನಿನಗ ಎಷ್ಟುಸಾರೆ ಹೇಳೇನಿ, ನನ್ನ ರಾಜಸುಖದ ಮಾತೆತ್ತಬ್ಯಾಡಾಂತ? ಅಂಥಾ ರಾಜಸುಖದ ಐಶ್ವರ್ಯದೊಳಗ ಬೆಳೆಯೋದರಕಿಂತ, ನಿನ್ನಂಥವನ ಮನೀ ಒಳಗ ಒಕ್ಕಲಗಿತ್ಯಾಗಿ ಬಾಳೋದು ಗುಣಾ ಅಸಸ್ತದ." "ಉಶ್ ಹುಚ್ಚೀ! ಹಾಂಗೆಲ್ಲಾ ಹೇಳಬ್ಯಾಡಾ. ಸುಮ್ಮನಿರು!"

ಸ್ವತಃ ಪ್ರೇಮಾನೇ ಚಹವನ್ನು ತಯಾರಿಸಿದಳು. ಶಶಿಧರನು ತಾಜಾ ರೋಟು–ಬೆಣ್ಣೆಗಳನ್ನು ತೆಗೆದನು. ಇಬ್ಬರೂ ತಿಂದು ಚಹ ಕುಡಿದರು. ಶಶಿಧರನು ಅವಳ ಕೈಯಲ್ಲಿ ಅಡಿಕೆ–ಯಾಲಕ್ಕಿಗಳನ್ನಿಡುತ್ತ, ಅವಳನ್ನು ನೋಡಿ, ಬಿದ್ದು ಬಿದ್ದು ಒಮ್ಮೆಲೇ ನಗಹತ್ತಿದನು. ಪ್ರೇಮಾ "ಯಾಕ? ಏನಾತು?..ಯಾವಾಗಿದ್ರೂ ಸಿಂದ ಹಿಂಗs ಚಾಷ್ಟಿ..ಸುಮ್ಮಸುಮ್ಮನ ನಕ್ಕುನಕ್ಕು ನನ್ನಷ್ಟ ಅಳಿಸಿದೆಂದ್ರ ನಿನ್ನ ಹೊಟ್ಯಾಗ ಧಣ್..ಗಾಗತದ!..".. ಮತ್ತೆ ಬೊಳ್ಳಿಂದು ನಕ್ಕನು: "ಬಾಯೀಸಾಹೇಬ್ರು ಚಹಾ ಮಾಡೀರೆಂತ ಮಂದಿಗೆಲ್ಲಾ ಗೊತ್ತಾಗ ಬೇಕ ಕಾಣಸ್ತದ. ಗಲ್ಲಕ್ಕ ಕಪ್ಪು ನೋಡಿಕೋ." ಟಾವೆಲಿನಿಂದ ಒರೆಸಿಕೊಂಡು "ಹೋತs?" ಅಂದಳು. ಮತ್ತೆ ನಗುವಿಗಾರಂಭ. "ಯಾಕೋ ಶಶಿ? ನಾ ಹೋಗ್ತೇನ್ನೋಡು." "ಅಲ್ಲಾ–ಎಡದ ಗಲ್ಲಾ ಒರಿಸಿಗೊಂಡೀ..ಹೂಂ..ಬಲದ ಗಲ್ಲಕ್ಕ ಕಪ್ಪಿಟಗೊಂಡು!..ಅದಕ್ಕ ನಕ್ಕೆ." ಮತ್ತೆ ಒರೆಸಿ, "ಹೋತs ಈಗರ?" ಮತ್ತೆ ನಗಹತ್ತಿದ. ಮೋರೆ ಕೆಂಪೇರಿಸಿಕೊಂಡು ಅತ್ತಿತ್ತ ಹುಡುಕಾಡಿ, "ಕನ್ನಡೀ ನುದ್ದಾ ಟ್ರಂಕಿನ್ಯಾಗಿಡತೀದೇನು?" "ನಿಮ್ಮ ಹಿಂದs ಅದ ನೋಡ್ರಿ ಬಾಯೀ ಸಾಹೇಬ." ಕನ್ನಡಿ ನೋಡಿದಳು–ಮುಖವು ಸ್ವಚ್ಛವಾಗಿತ್ತು. "ಸಾಕ ಬಿಡು ನಿನ್ನ ಚಾಷ್ಟಿ–ಹೀಂಗs ನೀವು ಗಂಡಸರೆಲ್ಲಾ ಯಾವಾಗಿದ್ರೂ ಚಾಷ್ಟಿ ಮಾಡಾವ್ರು–ಅದಕಂತ ದೇವ್ರು ನಮ್ಮ ಗಲ್ಲಾ ಯಾವಾಗಿದ್ರೂ ಚಲೋ ಇಟ್ಟು, ಗಂಡಸರ ಗಲ್ಲಕ್ಕ ಕಾಯಂ ಕಪ್ಪು ಹಚ್ಚಿಬಿಟ್ಟಾ ನ್ನೋಡು! ದಿನಾಸೂ ಬ್ಲೇಡ್ ತಗೊಂಡು ಎದ್ದಕೂಡ್ಲೇ ಸೋಪಿನ ಬುರುಗಾ ಹಚ್ಚಿ ಹಚ್ಚಿ ಬೆಳ್ಳಗ ಮಾಡೇ ಮಾಡತೀರಿ, ಸಂಜೀ ಅಂಬೋದ ರೊಳಗ ಮತ್ತ ಕಪ್ಪs!"

"ಪ್ರೇಮಾ, ಹೀಂಗ ಮಾತಿನಾಗ ಸೋಲಸ್ತೀರಂತ, ಹೆಂಗಸರಿಗೆ ಎದ್ಯಾ ಕಲಿಸಬಾರ್ದಂತಾರ ನೋಡು ಗಂಡಸರು".. ಇಬ್ಬರೂ ಬಿದ್ದು ಬಿದ್ದು ನಕ್ಕರು ಎಳೆಮಕ್ಕಳಂತೆ. ಅಷ್ಟರಲ್ಲಿ ಹಾರ್ನ ಕೇಳಿಸಿತು. ಇಬ್ಬರೂ ಗಾಬರಿಯಾದರು. ಆ ಮೂವರನ್ನೂ ಹೊರಗೆ ಕಾರಿನಲ್ಲಿ ಕುಳ್ಳಿರಿಸಿ ಮೈಮರೆತದ್ದಕ್ಕೆ ಪಶ್ಚಾತ್ತಾಪಪಟ್ಟು ಹೊರಗೆ ಬಂದು ನೋಡುತ್ತಾರೆ: ಎದುರಿಗೆ ಕಾರು ಬರುತ್ತಿತ್ತು.

ಪ್ರೇಮಾ ಕೇಳಿದಳು "ಯಾಕೋ ಪಶ್ಯಾಪು! ಅವ್ವ, ಶಾಂತಾ ಎಲ್ಲಿ? ಸಿಟ್ಟಾಗಿ ಹೋದ್ಲೋ ಏನು ಪುತ್ತ್ಯ ಅವ್ವ?" "ಇಲ್ರೀ. ನೀವು ಇಳದ ಕೂಡ್ಲ ಸುಮ್ಮನ ಕೂತೇನ್ಮಾಡೋದು? ಅವರ ಚಹಾ-ಗಿಹಾ ಆಗಿ ಬರೋತನಕಾ ಕುರ್ಚಿ ರಿಝರ್ವ ಮಾಡಿಸಿ-ನಮ್ಮನ್ನ ಬಿಟ್ಟ ಬಾ ನಡೀಅಂದ್ರು..ಹೋಗಿದ್ಲ.."

ಪ್ರೇಮಾನ ಜೀವದಲ್ಲಿ ಜೀವ ಬಂದಿತು. ಸಿನೇಮಾ ಎಂಟೂವರೆಗೆ ಮುಗಿಯಿತು. ಕಲಾವತಿಬಾಯಿಯು ತಿರುಗಾಡಲಿಕ್ಕೆ ಬರಲೊಪ್ಪಲಿಲ್ಲ. "ಸಣ್ಣ ಹುಡುಗರೊಳಗ ನಂದೇನದ?" ಎನ್ನುತ್ತ ಮನೆಗೆ ಹೋಗಿ ಸ್ವಸ್ಥವಾಗಿ ಮಲಗಿದಳು.

ನಾಲ್ವರೂ ಕೂಡಿ, ಒಂದು ಹೋಟಲಿನಲ್ಲಿ ಹೊಕ್ಕು ಹೊಟ್ಟೆತುಂಬ ಫಲಾಹಾರ ಬಿಗಿದರು. ಕಾರು ಹೊಸ ಹುರುಪಿನಿಂದಲೋ ಏನೋ, ವೇಗದಿಂದ ಸಮುದ್ರದ ದಂಡೆಗೆ ಬಂದಿತು. ಶಾಂತಿಗೆ ಕಾರಿನಲ್ಲಿಯೇ ಕುಳ್ಳಿರ ಹೇಳಿ, ತಾವು ಸ್ವಲ್ಪ ನಡೆದಾಡಿಕೊಂಡು ಬರುವದಾಗಿ ಹೇಳಿ, ಇಬ್ಬರೂ ಮುಂದಕ್ಕೆ ಹೋಗಿ, ಒಂದು ಬಂಡೆಗಲ್ಲ ಮರೆಗೆ-ಉಸು ಕಿನಲ್ಲಿ ಕುಳಿತರು. ರಮ್ಯವಾದ ಬೆಳದಿಂಗಳ ನೋಟದಲ್ಲಿ ಇಬ್ಬರೂ ಕೆಲಹೊತ್ತು ಸ್ತಬ್ಧರಾಗಿದ್ದರು. ಥಪಲ್ಲೆಂದು ತೆರೆಯೊಂದು ಸಮುದ್ರ ನಾಥನ ಹೃದಯದಿಂದ ಮೇಲಕ್ಕೆದ್ದಿತು. ಇತ್ತ ಶಶಿಧರನ ಹೃದಯದ ಕ್ಷೀರಸಾಗರದಿಂದಲೂ ಪ್ರೇಮಸುಧೆಯ ಒಂದು ದೊಡ್ಡ ತೆರೆಯು ಮೇಲಕ್ಕೆದ್ದಿತು. ಅದರೊಡನೆಯೇ ಅವನ ಒಲಗೈಯು ಫಕ್ಕನೆದ್ದು, ಪ್ರೇಮಾನ ಬಲಗೈಯನ್ನು ಗಟ್ಟಿಯಾಗಿ ಹಿಡಿಯಿತು.

ಪ್ರೇಮಾ ತನ್ನ ಮೇಲೆ ಏನೋ ಅನಿಷ್ಟ ಒದಗಿತೆಂಬ ಭಯದಿಂದ ಬೆಚ್ಚಿಬೆದರಿದಳು. "ಶಶೀ-ಇದೇನು-ಶಶೀ? ಬಿಡೂ. ಕೈ ಬಿಡೂ. ಒಂದು ದಿವ್ಸ ಸಹ ನೀ ಹಿಂಗ ಮಾಡಿದಾಂವಲ್ಲಾ, ನಮ್ಮವ್ವಸಂಘಾಕೀ ಮನೀವಳಗಿದ್ದು ಬಂದಿನಾನೂ ಇಂಥಾ ಪ್ರಸಂಗ ನನ್ನ ಮ್ಯಾಲೆ ಒರಲಿಲ್ಲಾ. ಪರಮಾತ್ಮಾ ಕಾಯಕೋತ ಬಂದಾನ. ಜಗತ್ತಿನೊಳಗ ಎಂದಾರ, ಯಾವ ಮಹಾರಾಯನರ ಲಗ್ನ ಮಾಡಿಕೊಳ್ಳಿಕ್ಕೆ ಸಿದ್ಧಾದ್ರ, ಆ ಹೊತ್ತ ಮಾತ್ರ ನನ್ನ ಕೈ ಅವನ ಕೈಯೊಳಗ ಬಿದ್ದೀತೂ ಹೊರತಾಗಿ, ನಾ ಅನ್ಯಥಾ ಇಂಥಾ ಮಾತಿಗೆ ಒಪ್ಪಲಾರೆ. ಬಿಡೂ ನನ್ನ ಕೈ!"

೮೦ ಗ ಪ ಲ್ರಿ

"ಬಾಯೀಸಾಹೇಬರ, ಇವೊತ್ತ ಶಶೀ ಅಂಥಾವ್ನs; ತಮಗ ಲಗ್ನಾಗಲಿಕ್ಕೆ ಸಿದ್ಧಾಗ್ಯಾನ–ಅದಕಂತs ಪರಮಾತ್ಮ ಅವನ ಕೈಯೊಳಗ ನಿಮ್ಮ ಕೈ ಕೊಟ್ಟಾನ. ಪ್ರತಿಯೊಬ್ಬ ಮನುಷ್ಯಾನ ಕೀರ್ತಿ, ಕುಲದ ಮೇಲಲ್ಲಾ, ಶೀಲದ ಮ್ಯಾಲದ. ಜಾತೀ ಮೇಲಲ್ಲಾ, ನೀತೀಮ್ಯಾಲದ. ಅಂತs, ಸಮಾಜಕ್ಕೆಲ್ಲಾ ತಿಳೀಲಂತ, ಮುಂಬಯಿಯಂಥಾ ದೊಡ್ಡ ಪಟ್ಟಣದೊಳಗ ಮೊದಲನೇ ಉದಾಹರಣ ಹಾಕಿಕೊಡತೇನಿ!"

"ಶಶಿಧರಾ! ನನ್ನ ಚಾಷ್ಟೀ ಮಾಡತೀದ್ಯಾ? ನನ್ನ ನೀ ಮದಿವ್ಯಾಗೋದಂದ್ರ ಏನಿದು? ನನ್ನ ಮನಸಿನ ಪರೀಕ್ಷಾ ನಡಿಸೀದ್ಯಾ..?" ಮೋರೆ ಕೆಂಪೇರಿ ಅಳಹತ್ತಿದಳು. "ಪ್ರೇಮಾ, ಖರೆ ಹೇಳ್ತೇನಿ–ಸತ್ಯವನ್ನ ಸ್ಮರಿಸಿ ಹೇಳ್ತೇನಿ–ಅದಕ್ಕs ನಿನ್ನ ಇವೊತ್ತ ಇಲ್ಲೆ ಕರಿಸಿಗೊಂಡೇನಿ. ಇಷ್ಟು ನನ್ನ ಹೃದ್ಗತ ನಿನ್ನ ಮುಂದ ಬಿಚ್ಚಿಟ್ಟು, ನಿನ್ನ ಸಮ್ಮತೀನೂ ಪಡದ ಹೊರತು ನನ್ನ M. A. Papers satisfactorily solve ಮಾಡೋದು ಶಕ್ಯ ಇಲ್ಲಾ. ಇಕೋ! ಇದು ನನ್ನ ಧರ್ಮವಚನ." ಅವಳ ಕೈ ಮೇಲೆ ಕೈ ಹಾಕಿದನು.

ಪ್ರೇಮಾನಿಗೆ ನಿಜವಾದ ಆನಂದವಾಯಿತು. ಕ್ಷಣಕಾಲ ಅವನ ಕೈಯಲ್ಲಿದ್ದ ತನ್ನ ಕೈಯನ್ನು ಅಲ್ಲಿಯೇ ಮರೆತು, ಆನಂದದಲ್ಲಿ ಮಗ್ನಳಾಗಿದ್ದಳು. ಶಶಿಧರನು ಸುಮ್ಮನೆ, ಅವಳ ಮುಖವನ್ನು ನೋಡುತ್ತಿದ್ದನು. ಮತ್ತೊಂದು ತೆರೆಯು ಧಡಲ್ಲೆಂದು ಎದ್ದು, ಮನೆಗೆ ಹೋಗಲು ಹೊತ್ತಾಯಿತೆಂದು ಇಬ್ಬರನ್ನೂ ಎಚ್ಚರಗೊಳಿಸಿತು. ಇಬ್ಬರೂ ಹೊರಡಲನುವಾದರು.

"M. A ದ ಪೇಪರು ಬಿಡಿಸಲಿಕ್ಕೆ ಈಗರ ಮನಸಿಗೆ ಅನುಕೂಲ ಆತೋ ಇಲ್ಲೋ ನಿಮಗ?" "ಓಹೋ, ಆಗದೇನು, ರಾಣೀಸಾಹೇಬ? ನಿಲ್ಲಿರಿ, ಏನೋ ಪಿಸುಗುಡಲಿಕ್ಕೆ ಹತ್ಯಾರ–ಯಾರೋ..."

ಇಬ್ಬರೂ ತಡೆದರು; ಗಿಡದ ಮರೆಗೆ ನಿಂತರು. ವಿಶ್ರಾಮನು ಮೋಟಾರಿನಲ್ಲಿಯೇ ಕುಳಿತಿದ್ದಾನೆ. ಶಾಂತಿಯು ಕೆಳಗೆ ನಿಂತಿದ್ದಾಳೆ. ವಿಶ್ರಾಮನು ತನ್ನೆರಡೂಕೈಗಳಿಂದ ಅವಳಕೈಗಳನ್ನು ಗಟ್ಟಿಯಾಗಿ ಹಿಡಿದಿದ್ದಾನೆ.. "ಲಗೂನ ಹೇಳು ಶಶಿಧರರಾಯರ ಸಂಗಡ ಪ್ರೇಮಾ ಬಾಯಾರ ಲಗ್ನಾದ್ರಾರ, ನನಗ ನೀ ಮಾಡಿಕೊಳ್ಳುವಾಕ್ಯೋ ಇಲ್ಲೋ?"

೧೬೪

"ಹೂನ್ರೀ ಅವರ್ದ್ವರ ಮುಂಚ್ಯಾಗಿ, ಆ ಕಲಾವತಿಬಾಯಾಗ ಕಿಟಿಕಿಟಿ ಯೊಳಗಿಂದ ಪಾರಾಗ್ಲಿ ನನ್ನ ಪ್ರೇಮಾಬಾಯಾರು. ಅಂದ್ರ ನಾ ಖರೇ ಅಂದ್ರೂ ನಿಮ್ನ ಲಗ್ನಾಗತೇನಿ. ಲಗೂ ಕೈ ಬಿಡ್ರೀ... ಅವರಿಬ್ರೂ ಬರೂಹೊತ್ತಾತೂ."

"ಕೇಳಿದಿರಾ, ನಮ್ಮ ಲಗ್ನದ ಮ್ಯಾಲೆ ಇವರಿಬ್ಬರ ಆಯುಷ್ಯ ಅವಲಂಬಿಸೇದ!" "ಈಗಾಗಲೆ ಬಹುವಚನ ಹಚ್ಚಿದೆಲ್ಲಾ!" ಸಂಗೀತ ನನ್ನು ಗುಣಗುಣಿಸುತ್ತ ಪ್ರೇಮಾ ಬರಹತ್ತಿದಳು. ಇಬ್ಬರೂ ಬೇರೆ ಯಾದರು. ವಿಶ್ರಾಮನು ಮೋಟಾರಿಗೆ ಕೀಲಿ ಕೊಡತೊಡಗಿದನು. ಇಬ್ಬರೂ ಬಂದು ಕುಳಿತರು. ಹಾರ್ನ ಹಾಕಿ ಮೋಟಾರು ಬಿಟ್ಟನು. ದಾರಿಯಲ್ಲಿ ಹೋಗಹೋಗುತ್ತ ಶಶಿಧರನ ಕಡೆಗೆ ಪ್ರೇಮಾ ಕೃತಜ್ಞತೆ ಯಿಂದ ನೋಡುತ್ತಿದ್ದಳು. ಶಶಿಧರನು ಮುಂದೆ ಒಂದು ವಾರದವರೆಗೆ ತನ್ನ ಬೆಟ್ಟಿಯ ಅಪೇಕ್ಷೆ ಮಾಡಬೇಡವೆಂದವಳಿಗೆ ಹೇಳಿದನು.

ಮುಂದೆ ನಾಲ್ಕಾರು ದಿನಗಳು ಕಳೆದವು. ಪ್ರೇಮಾ ಈಗ ಮಾತ್ರ ಹೊಟ್ಟೆತುಂಬ ಊಟಮಾಡಹತ್ತಿದಳು. ಕಣ್ತುಂಬ ನಿದ್ರೆ ಮಾಡಹತ್ತಿ ದಳು. ಸಾಯಂಕಾಲಕ್ಕೆ ದಿನಾಲೂ ತಾಯಿಯನ್ನು ಕರೆದುಕೊಂಡು ತಿರುಗಾಡಹತ್ತಿದಳು. ಒಂದು ದಿವಸ ಅವಳ ಮನಸು ಪ್ರಶಾಂತವಿದ್ದ ಸಮಯವನ್ನರಿತು, ತನ್ನೊಡನೆ ಶಶಿಧರನು ಮದುವೆಯಾಗಲೊಪ್ಪಿದ ಪ್ರಸ್ತಾಪವನ್ನೆತ್ತಿ ಎಲ್ಲವನ್ನೂ ಹೇಳಿದಳು. ಕಲಾವತಿಬಾಯಿಗೆ ಆಕಾಶವು ಮೂರೇ ಬೆರಳು ಉಳಿದಂತೆ ಕಂಡಿತು. ಹರುಷದಲ್ಲಿ ಓಲಾಡಹತ್ತಿದಳು.

"ಅಯ್ಯೋ ನಮ್ಮವ್ವಾ! ಭಾಳ ಛಲೋ ಆತ ಬಿಡ—ನಾವು ತಾಯಿ-ಮಗಳು ಅವನ ಕಾಲಿಲೇನ ಧನ್ಯ ಆದ್ಹಾಂಗಾದ್ವಿ—ನನ್ನ ಆಸ್ತೀಯೆಲ್ಲಾ ನಿಮ್ಮಿಬ್ಬರಿಗೆ ಕೊಟ್ಟು, ಹಾಕಿದಾಗ ಒಂದ ತುತ್ತು ಊಟಾ ಮಾಡಿ-ಕೊಂಡಿರತೇನಿ."

"ಅವ್ವಾ- ನಮ್ಮ ಆಸ್ತೀ ಬೇಡ್ಲಿಕ್ಕೆ ಅವರಿಗೇನ ಕಡಿಮ್ಯಾಗೇದ?" ಎನ್ನುತ್ತ ಅವನ ಪೂರ್ವದ ಇತಿಹಾಸವನ್ನೆಲ್ಲಾ ಒಂದೂ ಬಿಡದಂತೆ, ಅವನು ಹೇಳಿದ ಹಾಗೆಲ್ಲ ಹೇಳಿದಳು. ಒಂದು ತಿಂಗಳೊಪ್ಪತ್ತಿನಲ್ಲಿ ಇಬ್ಬರ ಪರೀಕ್ಷೆಯ ಫಲಿತಾಂಶವಾಯಿತು. ಇಬ್ಬರೂ ಮೆಲ್ತರಗತಿ ಯಲ್ಲಿ ಉತ್ತೀರ್ಣರಾದರು.

ಮರುವಾರವೇ ಕಲಾವತಿಬಾಯಿಯ ಬಾಗಿಲಲ್ಲಿ ದೊಡ್ಡ ಹಂದರ. ಪ್ರೇಮಾ–ಶಶಿಧರರ ಮದುವೆಯು ತೀರ ಹೊಸತರದ್ದಾಗಿ ಬಹು ಸಡಗರ ದಿಂದ ಜರುಗಿತು. ಮದುವೆಗೆ ನಾಶಿಕದ ವಿನೂಬುವಾ ಆವರು (ಶಶಿಧರನ ವಿನಾಯಕ) ಆದರಪೂರ್ವಕವಾಗಿ ಬಂದಿದ್ದರೆಂದು ಮದುವೆಗೆ ವಿಶೇಷ ವಾಗಿ ಕಳೆಯೇರಿದ್ದಿತು. ಊರೊಳಗಿನ ದೊಡ್ಡ ದೊಡ್ಡ ಪ್ರಮು ಖರೂ, ಸುಧಾರಕರೂ ಮದುವೆಯ ಮಂಟಪವನ್ನು ಸುಶೋಭಿತ ಗೊಳಿಸಿದ್ದರು. ದಕ್ಷಿಣೆ–ತಾಂಬೂಲದಾನಕ್ಕಾಗಿ ಬ್ರಾಹ್ಮಣ–ಮುತ್ತೈ ದೆಯರೂ, ಅನ್ನದಾನಕ್ಕಾಗಿ ಯಾಚಕರೂ ಎಷ್ಟೋ ಜನರು ಜಾತ್ರೆಯಾಗಿ ನೆರೆದಿದ್ದರು. ಮದುವೆಯ ಮರುದಿವಸ ಇಬ್ಬರ ಸ್ನೇಹಿತವರ್ಗಕ್ಕೂ ಒಂದು ಸಂತೋಷಕೂಟವನ್ನು ಏರ್ಪಡಿಸಲಾಯಿತು.

ಮರುವರುಷವೇ ಇಬ್ಬರ ಪ್ರೇಮದ ಕುರುಹು ಎಂದು ಒಂದು ಕನ್ಯಾರತ್ನವಾಯಿತು. ಒಂದು ದಿವಸ ಬೇಬಿಯನ್ನು ಕರೆದುಕೊಂಡು ಇಬ್ಬರೇ ತಿರುಗಾಡಲಿಕ್ಕೆ ಹೋಗಿದ್ದರು. ಪ್ರೇಮಾನಿಂದ ಮಾತಿಗೆ ಮೊದಲಾಯಿತು.

"ಅಂತೂ ಇಷ್ಟು ಸುಖದ ದಿವಸಾ ನಾ ಕಾಣತೇನಂತ ನನಗೇನ ಅನಿಸಿದ್ದಿಲ್ಲಾ....'

ಶಶಿಧರನೆಂದನು. "ಇನ್ನೂ ಮುಂದ ನೋಡೀಯಂತ ನಮ್ಮ ಬೇಬೀ ಕಾಲ್ಗುಣಾ! ನಿನ್ನ ಮೂರ್ತೀನ ನೋಡ, ಪ್ರೇಮಾ ಇಕಿ..?"

"ಆಹಾ, ಏನ ಹೇಳಿಬಿಟ್ರಿ, ಮೂಗ ನೋಡ್ರಿ, ನಿಮ್ಹಾಂಗ ಆದನೋ ಇಲ್ಲೊ ತುದೀಯಿಲ್ಲದ್ದು?.."

"ಕಣ್ಣರ ನಿನ್ಹಾಂಗವನೋ ಇಲ್ಲೋ!...."

"ಹಾ, ಅದು ಮಾತ್ರ ಖರೇ.." ಹೀಗೆಯೇ ಹರಟುತ್ತಲಿದ್ದು, ಇಬ್ಬರ ನಡುವೆ ಆಡುತ್ತ ಯಾರ ಗೋಜಿಗೂ ಹೋಗದೆ ಕುಳಿತಿದ್ದ ಬೇಬಿ ಯನ್ನು ಮುತ್ತಿಡಲು ಅವಳ ಎರಡೂ ಗಲ್ಲಗಳಿಗೆ ಇಕ್ಕಡೆಗಳಿಂದ ಇಬ್ಬರೂ ಬಾಗಿದರು. ಆದರೆ ಆ ಪುಟ್ಟ ಬೇಬಿಯೆಂತಹ ಕಳ್ಳಿ! ತಂದೆತಾಯಿ ಗಳು ಒಮ್ಮೆಲೇ ಹೀಗೆಕೆ ತನ್ನ ಮೇಲೆ ಮುತ್ತಿಗೆ ಹಾಕಿದರೆಂದು ಗಾಬರಿ ಯಾಗಿ, ಪಟ್ಟನೆ ತನ್ನ ಮುಖವನ್ನು ಹಿಂದಕ್ಕೆ ತೆಗೆದುಕೊಂಡು ಬಿಟ್ಟಳು!

# ಒಂದು ಘಟನೆ

ಪತಿಯಿಲ್ಲದ ಸತಿಯು ಜನ್ಮ ಏಕೆ ಎಂದು ಪ್ರಾಣ ನೀಗುತ್ತಿರುವ ಸತಿಗೆ ವಿಮಾನದಿಂದಿಳಿದ ದಂಪತಿಗಳು 'ಟ್ರಾನ್ಸ್ಫರಸೀನರಿ'ಯಾಗಿ ಬಂದ 'ಶಿವ–ಪಾರ್ವತಿ'ಯರಂತೆ ಕಾಣುವರು. ಇದರಿಂದ ಗಾಬರಿಯಾದ ತರುಣಿ 'ಶಿವ–ಪಾರ್ವತಿ ಯರ ಆದರದ ಮಾತಿನಿಂದ ಅವರ 'ಕೈಗೊಂಬೆ'ಯಾಗುವಳು. 'ಅಬಲೋದ್ಧಾರಕ ಅಣ್ಣಾ'ಸಿಗೆ ಇದು ಇಷ್ಟವೇ.

ಕತೆಗಾರ್ತಿ

# ಶ್ರೀಮತಿ "ಮಾಲಕ್ಷ್ಮಿ"

ಶ್ರೀಮತಿ "ಮಾಲಕ್ಷ್ಮಿ" ಇವರು ಮೂಲತಃ ವಿಜಾಪುರ ಜಿಲ್ಹೆಯವರು. ಉತ್ತರ ಕರ್ನಾಟಕದಲ್ಲೆಲ್ಲ ಪ್ರವಾಸ ಮಾಡುತ್ತಿರುತ್ತಾರೆ.

ಇವರು ಬರಹಗಾರರೆಂದು ಮುಂದೆ ಬಂದವರಲ್ಲ. ಜೀವನದೊಳಗಿನ ಕಷ್ಟಗಳ ಪ್ರತ್ಯಕ್ಷ ಅನುಭವದಿಂದಲೂ. ಸಂಸಾರದ ಸೂಕ್ಷ್ಮಾವಲೋಕನದಿಂದಲೂ ಪ್ರಾಪಂಚಿಕರ ಬಗ್ಗೆ ಒಂದು ಕನಿಕರವೂ ಸನ್ಮಾರ್ಗದ ಬಗ್ಗೆ ಒಂದು ವಿವೇಕವೂ ಅವರಲ್ಲಿ ಉದಿಸಿದೆ. ಅದು ಅವರು ಬರೆದಿಟ್ಟ ಆತ್ಮಚರಿತ್ರ, ದಿನವಹಿ ಮೊದಲಾದವುಗಳಲ್ಲಿ ಕಂಡುಬರುವದು.

ಅವರ ಈ ಲೇಖನವು ಪತ್ರರೂಪದಲ್ಲಿದ್ದು ಒಂದು ಜೀವನದ ಕರುಣಕಥೆಯನ್ನು ಪೌರಾಣಿಕ ಛಾಯೆಯಲ್ಲಿ—ಇಂದಿನ ರೂಪದಲ್ಲಿ ಚಿತ್ರಿಸುವದು. ಇವರ ಉಳಿದ ಲೇಖನಗಳು ತಕ್ಕ ಒಪ್ಪವನ್ನು ಹೊಂದಿ ಮುಂದೆ ಪ್ರಕಟವಾದರೆ ಉತ್ತರ ಕರ್ನಾಟಕದ ಹಳ್ಳಿಗರ ಜೀವನದ ಒಂದು ಕರುಣ ದಾರುಣ ಚಿತ್ರವು ಕನ್ನಡಿಗರ ಕಣ್ಣೆದಿರು ಕಟ್ಟಿದಂತಾದೀತೆಂಬ ಆಶೆಯಿದೆ.

ಅಣ್ಣ,

ನಿನ್ನ ಕಾಗದ ತಲಪಿತು. ನೀನು ಅಮರಾವತಿಯಿಂದ ದಿಲ್ಲಿಗೆ ಬಂದ ಸಂಗತಿಯೂ ಬಂದ ದಿನಸವೇ ನಿನ್ನ ಮನೆಯಲ್ಲಿ ನೆರೆದ ಸಭೆಯ ವಿಚಾರವೂ ತಿಳಿದು ಬಹಳ ಸಂತೋಷವಾಯಿತು. ನಿನ್ನ ಪ್ರೀತಿಯ ಕರೆಗೆ ನಾನು ನನ್ನ ಪತಿಯೊಡನೆ ಸಕಾಲಕ್ಕೇ ಹೊರಟೆ. ಆದರೆ ದಾರಿಯಲ್ಲಿ ನಡೆದ ಒಂದು ಘಟನೆಯಿಂದ ನಿನ್ನಡಿಗೆ ಬರಲು ತಡೆಯಾಯಿತು.

ನಾವು ಆಕಾಶಯಾನದಿಂದ ಬರುತ್ತಿರುವಾಗ ಅಡವಿಯಲ್ಲಿ ಒಂದು ಭೀಕರ ದೃಶ್ಯವನ್ನು ಕಂಡೆವು. ಮಧ್ಯಾಹ್ನದ ಉರಿಬಿಸಿಲು. ಅದರಲ್ಲಿ ಬೇಕಾಗಿ ಮಾಡಿದ ದೊಡ್ಡದೊಂದು ಕಿಚ್ಚು. ಅದರ ಮುಂದೆ ಒಬ್ಬ ಎಳೆ ವಯಸ್ಸಿನ ತರುಣಿ ಕೈ ಮುಗಿದು ನಿಂತಿದ್ದಳು. ಆಕಸ್ಮಾತ್ ಈ ದೃಶ್ಯವು ನನಗೆ ಕಾಣುತ್ತಲೇ ನನ್ನ ಪತಿರಾಯರಿಗೆ ನಮ್ಮ ಯಾನವನ್ನು ಇಳಿಸು ವಂತೆ ಬೇಡಿಕೊಂಡೆ. ಅದರಂತೆ ನಮ್ಮ ವಿಮಾನವು ಅಲ್ಲಿ ಇಳಿಯಿತು.

ಒಂದು ಘಟನೆ

ನಾನು ಆತುರದಿಂದ ಕೆಳಗಿಳಿದು ಅವಳ ಸನಿಯಕ್ಕೆ ಹೋಗಿ ಅವಳ ಕೈಹಿಡಿದೆ. ಅವಳು ಬಹಳ ಗಾಬರಿಯಾದಳು. ಕಕ್ಕಾವಿಕ್ಕಿಯಾಗಿ ನಾವು, ನಮ್ಮ ವಾಹನ, ಎಲ್ಲ ನೋಡಿ ಮತ್ತಿಷ್ಟು ಅಂಜಿ ನಡುಗಹತ್ತಿದಳು. ನಾನು ಅವಳ ಮೈದಡವುತ್ತ "ಏನಕ್ಕಾ ಇದು" ಎಂದೆ. ಅವಳು ಅದೇ ಪ್ರಶ್ನೆಮಾಡುವಂತೆ ನನ್ನನ್ನು ನೋಡಿದಳು. ನಾನು "ನಾವು ಪ್ರವಾಸಿಗಳು, ದಿಲ್ಲಿಗೆ ಹೊರಟಿದ್ದೇವೆ. ಮೇಲಿನಿಂದ ನಿನ್ನನ್ನು ನೋಡಿ ಇಳಿದೆವು. ನೀನು ಇಲ್ಲಿ ಯಾಕೆ ಬಂದಿರುವೆ? ನಿನ್ನ ಊರಾವುದು? ನಿನಗೆ ಬಂದ ವಿಪತ್ತು ಏನು? ಇದನ್ನೆಲ್ಲ ಏನು ಮಾಡುತ್ತಿರುವಿ ಹೇಳು" ಎಂದು ಆದರದಿಂದ ಅವಳನ್ನು ಹತ್ತಿರದಲ್ಲಿ ಕೂಡಿಸಿಕೊಂಡು ಕೇಳಿದೆ.

ಅವಳು "ತಾಯೇ, ಪುರಾಣದಲ್ಲಿ ಕೇಳಿದ್ದೆ: ಅಬಲೆಯರ ಪ್ರಾಣ ರಕ್ಷಣೆಗೆ ದೇವ ಟೊಂಕಕಟ್ಟಿರುವನೆಂದು; ಅವರ ವಿಪತ್ಕಾಲದಲ್ಲಿ ಅವರಿಗೆ ಪ್ರತ್ಯಕ್ಷನಾಗಿ ಬೇಡಿದ ವರವನ್ನು ನೀಡಿ ರಕ್ಷಿಸುವನೆಂದು. ಇಂದಿನ ನಾಟಕಗಳಲ್ಲಿ ಆ ಪುರಾಣದ ಕಲ್ಪನೆಯ ಛಾಯೆಯನ್ನು ಮೂಡಿಸುವ ಪ್ರಯತ್ನವನ್ನೂ ಕಂಡಿದ್ದೆ. ಆದರೆ ಅದು ಏನೋ ಒಂದು ವಿಚಿತ್ರ ಕಲ್ಪನೆ ಎಂಬಂತೆ ಕಂಡಿತ್ತು. ಆದರೆ ನೀವು ಈಗ ಅಕಸ್ಮಾತ್ ಒಂದೊದಗಿದ್ದು ನನ್ನನ್ನು ಪುರಾಣ ಕಾಲದ ಭಕ್ತಳನ್ನಾಗಿ ಮಾಡಿದೆ.

"ಮಾತೆ, ನನ್ನ ಕತೆ ಬಹಳ ತೊಡಕಿನದು. ನಿನ್ನ ಮುಂದೆ ಅದನ್ನು ಬಚ್ಚಿಡಲು ಶಕ್ಯವಿಲ್ಲ. ನನ್ನ ಪತಿ ಈಗಿನ ಸಾಧುಸಂತರ ಡಾಂಭಿಕ ಮಾಯಕ್ಕೆ ಒಳಪಟ್ಟು, ಅವರ ವೇದಾಂತಕ್ಕೆ ಮನಸೋತು, ಒಬ್ಬ ಗುರುವಿನ (?) ಜ್ಞಾನಸಿಂಧುವನ್ನು ಮೂಢಭಕ್ತಿಯಿಂದ ಕೇಳಿಕೊಂಡು, ಅವನಂತೆ ಸನ್ಯಾಸಿಯಾದರೆ ಸ್ವರ್ಗದೊರಕುವದೆಂದು ನಂಬಿ, ನನ್ನನ್ನು ಬಿಟ್ಟು ಎಲ್ಲಿಯೋ ಹೋಗಿಬಿಟ್ಟ. ತನ್ನ ಇದ್ದ ಸುಖಕ್ಕೆ ಕಲ್ಲುಹಾಕಿ, ಇಲ್ಲದ ಸುಖಕ್ಕೆ ಕೈ ಒಡ್ಡಿ ಭ್ರಾಂತಿಷ್ಟನಂತೆ ಆ ಮೋಸಗಾರರ ಬೆನ್ನು ಹತ್ತಿ ಹೋದ. ಅವನು ಹೋದಮೇಲೆ ನಾನು ನಿರಾಧಾರಿಯಾಗಿ ಅವನನ್ನೇ ದೇವರೆಂದು ನೆನಸುತ್ತ, ಪತಿ ನನ್ನ ಹತ್ತಿರ ಇಲ್ಲದೇ ಹೋದರೂ—ಅವನೆಲ್ಲಿದ್ದರೂ ಅವನು ಸುಖವಾಗಿರಲಿ, ನನ್ನ ಕುಂಕುಮ

ಸ್ಥಿರವಾಗಿ ಉಳಿಯಲಿ, ನನ್ನ ಪತಿಯ ಎಡೆಯಲ್ಲಿ ನನಗೆ ವಿವೇಕ, ವಿಧ್ಯೆ ಗಳಿರಲಿ ಎಂದು ಪರದೈವವನ್ನು ಪ್ರಾರ್ಥಿಸುತ್ತ ಒಂದು ಅಬಲಾಸಂಘದ ಆಶ್ರಯದಲ್ಲಿ ಕಾಲಹಾಕುತ್ತಿದ್ದೆ. ಆದರೆ ನನಗೆ ಅಲ್ಲಿಯ ತಂಜಾವರೀ ಜನರ ಕೈಯೊಳಗೆ ಇರುವದೂ ಬಹಳ ಕಷ್ಟವಾಯಿತು. ದೇವಾ ನನ್ನ ಜನ್ಮ ಅಡ್ಡ ಹಾದಿಗೆ ಬಿತ್ತಲ್ಲ! ನನ್ನನ್ನು ಅನಾಥಳನ್ನಾಗಿ ಮಾಡಿದೆ ಕೃಷ್ಣಾ, ಈ ಭವಮಾಲೆಯನ್ನು ಹೇಗೆ ಹರಿಯಲಿ? ನನಗೆ ನೀನಲ್ಲದೇ ಯಾರು ಆಶ್ರಿತರು ಹರಿಯೋ! ನನಗೆ ಈ ಕೃತ್ರಿಮ ಜನರ ಸಹವಾಸ ಬಹಳ ಬೇಸರಬಂದಿದೆ ಎಂದು ದಿನಾಲು ದೇವನಲ್ಲಿ ಪ್ರಾರ್ಥಿಸುತ್ತ ಕಾಲಕಳೆ ಯುತ್ತಿದ್ದೆ. ಹೀಗೆ ಇರುತ್ತಿರಲು ನನ್ನ ಗಂಡ ಕಾಶಿಯಲ್ಲಿ ತೀರಿದನೆಂದು ಸುದ್ದಿ ಬಂತು. ಈ ಮೊದಲು ಅವನು ಹೇಗೂ ಬದುಕಿರುವನಲ್ಲಾ ಎಂದು ಪರರಿಂದ ಎಂಥ ಸಂಕಟಬಂದರೂ ಸಹಿಸಿಕೊಂಡು ಪ್ರಿಯನೇ, ನಿನ್ನ ದಿವ್ಯ ಜ್ಯೋತಿಯಿಂದ ನಾನು ಆನಂದಿತಳೇ! ನೀನು ನನಗೆ ಮೊದಲಿನಿಂದಲೂ ಸಂಸಾರಸುಖ ನೀಡದೇ ಆ ಜನರ ಸಂಗತಿಯಿಂದ ನನ್ನನ್ನಗಲಿದಿ, ಇದು ನಿನ್ನ ತಪ್ಪಲ್ಲ; ನನ್ನ ಪೂರ್ವಜನ್ಮದ ಫಲ. ನನ್ನ ಅಪರಾಧವಾದರೂ ಏನು ಕಾಂತಾ, ನಾನು ನಿನಗೆ ಹಿಂದಿನ ಜನ್ಮದಲ್ಲಿ ವೈರಿಯಾಗಿರಬೇಕು. ನಿನ್ನ ಈ ರೀತಿಯಿಂದ ನನ್ನ ಜೀವನ ನಿಜವಾಗಿ ಹಾಳಾಯಿತು. ಅದಕ್ಕೆಂದೇ ಈ ಸಂತಾಪವು ನನಗೆ ಕೊನೆಗೆ ಘಟಿಸಿತು. ನಿನಗೆ ನನ್ನ ಮೇಲೆ ಸಿಟ್ಟು ಇದ್ದಿದ್ದರೆ ನನ್ನ ಚರ್ಮಸುಲಿಸಿ ನೀನು ಸುಖಿಯಾಗಿರಬೇಕಿತ್ತು. ಆದರೆ ನೀನೂ ನನ್ನಿಂದ ಯಾವ ಸುಖವನ್ನು ಕಂಡಿ? ನಾನೂ ನಿನ್ನ ಭಕ್ತಿಮಾರ್ಗ ವನ್ನು ಹಿಡಿಯಲಿಲ್ಲವಲ್ಲ! ನಾನು ಹಾಗೆ ಮಾಡಿದ್ದರೆ ನಿನಗೆ ಸುಖವಾಗು ತ್ತಿತ್ತೇ? ಇನ್ನು ನಾನಿದ್ದು ಏನುಫಲ? ನಾನು ಇನ್ನಾದರೂ ನಿನ್ನ ಕಡೆಗೆ ಬರುತ್ತೇನೆ ಎಂದು ಈ ಸಿದ್ಧತೆಯಲ್ಲಿದ್ದೆ. ಆಗ ತಾವು ಬಂದು ತಡೆದಿರಿ'' ಎಂದು ದುಃಖದಿಂದ ರೋದಿಸುತ್ತ ಹೇಳಿದಳು.

ಒಂದು ಘಟನೆ

ಅವಳ ಈ ಕರುಣಕತೆ ನನಗೆ ಬಹಳ ದುಃಖವನ್ನುಂಟುಮಾಡಿತು. ಅವಳಲ್ಲಿ ಬಹಳ ಕರುಣೆ ಹುಟ್ಟಿತು. ಇವಳದು ಏನು ತಪ್ಪು? ಎಂಥ ಗುಣವಂತೆ ಇವಳು! ಇವಳ ಗಂಡ ಇವಳ ಕೊರಳುಕೊಯ್ದ ಎನ್ನಿಸಿತು.

“ ನೀನು ನನ್ನ ಹತ್ತಿರ ಸುಖವಾಗಿ ಇದ್ದುಬಿಡುವಿಯೇನಕ್ಕಾ ” ಎಂದೆ. ಏನು ನನ್ನಲ್ಲಿ ಅವಳಿಗೆ ವಿಶ್ವಾಸ ಉಂಟಾಯಿತೋ ಅವಳು ಸಮ್ಮತಿಯ ದೃಷ್ಟಿಯಿಂದ ನನ್ನನ್ನು ನೋಡಿದಳು; ಅವರನ್ನು ನೋಡಿದಳು. “ ನಾನಿನ್ನು ನಿಮ್ಮ ಕೈಗೊಂಬೆ ” ಎಂಬುವಂತಿತ್ತು ಆ ನೋಟ.

ಅಣ್ಣಾ, ನಿನ್ನಲ್ಲಿ ಈ ಕಾರಣದಿಂದ ಬರಲಾಗಲಿಲ್ಲ. ನೀನೂ ಅನಾಥ ರಕ್ಷಕನಿರುವಿ. ಅಬಲೋದ್ಧಾರಕನಿರುವಿ. ಈ ಘಟನೆ ನೀನೇ ನನ್ನ ಪರೀಕ್ಷೆಗಾಗಿ ದಾರಿಯಲ್ಲಿ ರಚಿಸಿದಂತೆ ಕಂಡಿತು. ಆದರೆ ನಾನು ನಿನ್ನ ತಂಗಿ; ಮರೆಯದಿರು. ನಾನು ಮಾಡಿದ ಕೆಲಸ ನಿನ್ನದು; ನಿನ್ನ ಈ ಕೆಲಸಕ್ಕಾಗಿ ನಾನು ನಿಂತುದು ನಿನಗೆ ಬೇಸರವಿಲ್ಲವಷ್ಟೇ ! ನಿನಗೆ ಈ ಸಂಗತಿಯು ತಿಳಿದು ನಾನು ನಿನ್ನ ಆ ಸಮಾರಂಭಕ್ಕೆ ಬಂದಷ್ಟು ಸಂತೋಷವಾಗುವದಲ್ಲವೇ ?

ಸಾಧುಗಳೆಂಬವರ ಬೆನ್ನುಹತ್ತಿ ಯಾವುದೋ ವೇದಾಂತದ ಭ್ರಾಂತಿಯಲ್ಲಿ ಕೈಲಾಗದ ಕೆಲವು ಜನರು, ಹೆಣ್ಣಿನ ಕೈಹಿಡಿದೂ ಮುಳುಗಿಸುತ್ತಾರೆ–ಕೈಬಿಟ್ಟೂ ಮುಳುಗಿಸುತ್ತಾರಲ್ಲ ಈ ಜಗತ್ತಿನಲ್ಲಿ !

ಇತಿ ನಿನ್ನ ಸೋದರಿ,

**ಮಾಲಕ್ಷ್ಮಿ**